# ಮುಡಿಯದ ಹೂ

( ಮೋಪಾಸಾನ ಕತೆಗಳ ಸಂಕಲನ )

ಮೂಲ ಕತೆಗಾರರು

**ಗಾಯ್-ದ-ಮೋಪಾಸಾ**

ಅನುವಾದಕರು

**ಪಿ. ವೆಂಕೋಬಾಚಾರ್ಯ** ಬಿ.ಎ., ಬಿ.ಟಿ.

**ಆನಂದ ಗ್ರಂಥಮಾಲಾ-ಹುಬ್ಬಳ್ಳಿ.**





ಸಾದಾ ಪ್ರತಿ: ರೂ. ೦-೧೨-೦

ಉತ್ತಮ ಪ್ರತಿ: ರೂ. ೧-೮-೦

ಸಲಹೆಗಾರರು:

ಶ್ರೀ. ಎಸ್. ಆರ್. ಮಳಗಿ, ಎಂ. ಎ. ಬಿ. ಟಿ.

ಶ್ರೀ. ಎನ್. ಕೆ. ಕುಲಕರ್ಣಿ, ಎಂ. ಎ. ಬಿ. ಟಿ.

ಶ್ರೀ. ಆರ್. ವ್ಹಿ. ಕುಲಕರ್ಣಿ, ಎಂ. ಎ. ಬಿ. ಟಿ.

ಶ್ರೀ. ದೇಸಾಯಿ ದತ್ತಮೂರ್ತಿ



ಸಂಪಾದಕರು:

**ಶ್ರೀ. ಪಿ. ವೆಂಕೋಬಾಚಾರ್ಯ**, ಬಿ. ಎ. ಬಿ. ಟಿ.

## ಇದೇ ವರುಷ ನಮ್ಮ ಮಾಲೆಯಲ್ಲಿ ಪ್ರಕಟವಾಗಲಿರುವ ಪುಸ್ತಕಗಳು

| | |
|---|---|
| **ಪ್ರವಾದಿ:** (ಖಲೀಲ್‌ಗಿಬ್ರಾನರ Prophet) | ಶ್ರೀ. ದೇಸಾಯಿ ದತ್ತಮೂರ್ತಿ |
| **ಕವನ ಸಂಗ್ರಹ:** | ಶ್ರೀ. ಶ್ರೀಧರ ಖಾನೋಳಕರ |
| **ಕೆಲವು ಕತೆಗಳು:** | ಶ್ರೀ. ಪಿ. ವೇಣುಗೋಪಾಲ |
| **ಒಂದು ಕಾದಂಬರಿ:** | ಪ್ರೊ. ದ. ರಾ. ಬೇಂದ್ರೆ, ಎಂ. ಎ. |



ಮುದ್ರಕರು
**ಕೆ. ಜಿ. ತಾಪಸ**, ಬಿ. ಎ.
ಒಡೆಯರು: ಸುಧಾ ಪ್ರೆಸ್, ಹುಬ್ಬಳ್ಳಿ.

ಪ್ರಕಾಶಕರು
**ಪಿ. ವ್ಹಿ. ಆಚಾರ್ಯ** & ಕಂ
೩೦೩೦ ಗವಳೀಗಲ್ಲಿ, ಹುಬ್ಬಳ್ಳಿ

# ಸಂಚಾಲಕರ ನುಡಿ



ಮೋಪಾಸಾನ ಕತೆಗಳ ಮೂರನೇ ಸಂಕಲನವಾದ ಈ **ಮುಡಿಯದ ಹೂ** ಮಾಲೆಯ ಮೂರನೇ ವರುಷದ ಮೂರನೇ ಕುಸುಮವಾಗಿ ಬರುತ್ತಲಿದೆ. ಮುಂದೆ ಇದೇ ವರುಷ ಮತ್ತೊಂದೆಡೆ ಸೂಚಿಸಿದಂತೆ ಮತ್ತೆ ಮೂರು ಪುಸ್ತಕಗಳನ್ನು ೬೦೦ ಪುಟಗಳಿಗೆ ಮಿಕ್ಕದಂತೆ ನೀಡಲು ಯತ್ನಿಸುತ್ತೇವೆ. ಕನ್ನಡ ಜನಾಂಗವು ನೆರವು ಆದರಗಳನ್ನು ನೀಡಿ ಎಲ್ಲ ಬಗೆಯಿಂದಲೂ ಪ್ರೋತ್ಸಾಹಿಸಬೇಕಾಗಿ ಪಾರ್ಥನೆ.

ಜೂಲೈ ೧೯೫೩

ಸಂಚಾಲಕರು
**ಆನಂದ ಗ್ರಂಥಮಾಲಾ, ಹುಬ್ಬಳ್ಳಿ.**

## ಪರಿವಿಡಿ




| | | | | |
|---|---|---|---|---|
| ಜೂಲೀ ರೋಮೋ | .... | Julie Romain | .... | ೧ |
| ನರ್ತಕಿಯಾದರೇನು? | .... | Virtue in the Ballet | .... | ೧೩ |
| ನಾನು ಹುಚ್ಚನೇ? | .... | Am I Insane | .... | ೨೦ |
| ಹೆಣ್ಣು | .... | Useless Beauty | .... | ೨೫ |
| ತಂದೆ-ಮಗ | .... | Fecundity | .... | ೪೬ |
| ಮುಡಿಯದ ಹೂ | .... | Chali | .... | ೫೪ |
| ಕೋರ್ಟಿನಲ್ಲಿ | .... | In The Court Room | .... | ೬೩ |
| ವಿಚಿತ್ರ ಅನುಭವ | .... | Adventure | .... | ೬೮ |

# ಮೋಪಾಸಾನ ಕತೆಗಳು

## ಕಲಾವಿದೆ-ಜೂಲೀ ರೋಮೋ

ಎರಡು ವರುಷಗಳ ಹಿಂದೆ ವಸಂತ ಋತುವಿನಲ್ಲಿ ಮಧ್ಯಧರಾ ಸಮುದ್ರದ ದಡದಲ್ಲಿ ವಿಲಾಸದ ಪ್ರವಾಸದ ಮೇಲೆ ನಾನು ಹೊರಟಿದ್ದೆ. ಇಂತಹ ಸುಂದರ ಸಮಯದಲ್ಲಿ ತುಂಬು ಬೆಳದಿಂಗಳಿನ ದಿನಗಳಲ್ಲಿ ಓರ್ವನೇ ಕಾಲು ನಡೆಯಲ್ಲಿ ಹೋಗುವಾಗ ಆಗುವ ಆನಂದವು ಅನುಭವವೇದ್ಯವೇ ಹೊರತು ವರ್ಣನೆಯಿಂದ ಪೂರೈಸುವುದು ಆಗದ ಮಾತು. ಕೇನ್ಸದಿಂದ ಮೋನೇಕೋಕ್ಕೆ ಹೋಗುವ ದಾರಿ ಪ್ರೇಮಿಗಳಿಗೆ, ನವದಂಪತಿಗಳಿಗೆ, ವಿರಹಿಗಳಿಗೆ ಉತ್ತಮ ಸ್ಥಾನವೆಂದು ಸಾಹಿತ್ಯದಲ್ಲಿ ಉಲ್ಲೇಖವಿದೆ. ನಿಸರ್ಗವು ನೀಡುವ ಸೊಗಸನ್ನೆಲ್ಲವೂ ಇಲ್ಲಿ ಕಾಣಬಹುದು. ಸುಂದರ ನೀಲ ಗಗನ, ಸುವಾಸನೆಯ ಹವೆ, ಮಲ್ಲಿಗೆ, ರೋಜಾ ಪುಷ್ಪಗಳಿಂದಲೂ, ರುಚಿಯಾದ ನಾನಾ ಬಗೆಯ ಹಣ್ಣುಗಳ ವನಾಂತರಗಳೂ, ಕವಿಗಳಿಗೆ-ಕಲಾವಿದರಿಗೆ ಸ್ಫೂರ್ತಿಯನ್ನೀಯುವ ಚೆಲುವಾದ ಸ್ಥಳಗಳು, ಮುಂತಾದವು ಈ ಪ್ರದೇಶದಲ್ಲಿವೆ. ಆದುದರಿಂದಲೇ ನಾನೂ ಕಲೋಪಾಸಕನೆಂಬ ಹೆಮ್ಮೆಯಿಂದ ಈ ಭಾಗದಲ್ಲಿ ವಿಹರಿಸುವುದೆಂದು ನಿರ್ಧರಿಸಿದೆ. ಹಿಂದೇ ಅನೇಕ ಕವೀಶ್ವರರು ಕಂಡು ಸವಿಗನಸುಗಸನ್ನು ನಾನೂ ಕಾಣಬಹುದೆಂಬ ಆಶೆ, ನಾನು ಈ ಪ್ರದೇಶವನ್ನು ಪ್ರವೇಶಿಸಿದಾಗ, ನನ್ನೆದೆಯಲ್ಲಿ ನೆಲೆಸಿತ್ತು.

ಪಾದಚಾರಿಯಾಗಿ ನಡೆಯುವಾಗ ಸಮುದ್ರದ ನೀರು ಒಂದು ಕೊರಕಲಿನಲ್ಲಿ ಹಾದುನಿಂತ ರಮಣೀಯ ಪ್ರದೇಶದಲ್ಲಿ ನಾಲ್ಕೈದು ಮನೆಗಳಿರುವುದನ್ನು ದೂರದಿಂದಲೇ ಕಂಡು ನಾನೂ ಆ ಪ್ರದೇಶದಿಂದ ಅಂದವಾಗಿ ಕಾಣುವ

ಸಮುದ್ರ ರಾಜನನ್ನೂ, ಮುಂಬೆ ಕಾಣುವ ಕಣಿವೆಯ ಸೌಂದರ್ಯವನ್ನೂ ಕಂಡು ಆನಂದಿಸಬೇಕೆಂದು ಅಲ್ಲಿಗೆ ಹೋದೆ. ಅಲ್ಲಿ ಪ್ರಸಿದ್ಧ ಕಲಾವಿದರನ್ನಾರಾದರೊಬ್ಬರನ್ನು ಕಂಡರೂ ಕಾಣಬಹುದೆಂಬ ಆಶೆಯೂ ನನ್ನಲ್ಲಿ ಬೇರೂರಿತ್ತು.

ಆ ಪ್ರದೇಶವನ್ನು ಸಮೀಪಿಸಿದಾಗ, ಒಂದು ಕಡೆ ರಸ್ತೆ ಪಕ್ಕಕ್ಕೆ ಡೊಂಕಾಗಿ ತಿರುಗಿತ್ತು. ಆ ಅಂಚಿನಲ್ಲೊಂದು ಸುಂದರ ವನಾಂತರದಲ್ಲಿ ಚೊಕ್ಕವಾದ ಚಿಕ್ಕ ಮನೆಯೊಂದನ್ನು ಕಂಡೆ. ತೋಟದ ಗೇಟಿನ ಮುಂದೆ 'ಆಂತನವಿಲ್ಲಾ' ಎಂದು ಹಲಗೆಯಲ್ಲಿ ಬರೆದಿತ್ತು. ಇಂತಹ ಸುಂದರ ಹೆಸರಿನ 'ವಿಲ್ಲಾ'ದಲ್ಲಿ ಯಾವ ಕಲಾವಿದನಿರುವನೋ ಎಂದು ಯೋಚಿಸುತ್ತ ಅಲ್ಲಿಯೇ ಕೆಲಸಮಾಡುತ್ತಲಿದ್ದವನನ್ನು ಮನೆಯ ಒಡೆಯನ ಹೆಸರೇನೆಂದು ವಿಚಾರಿಸಿದೆ. 'ಜೂಲೀ ರೋಮೇ' ಎಂದು ಅವನಿಂದ ಮಾರುತ್ತರ ಬರಲು ಚಕಿತನಾದೆ. 'ಜೂಲೀ ರೋಮೇ'ಳ ಹೆಸರು ನನ್ನ ಎಳೆವಯಸ್ಸಿನಲ್ಲಿ ಕೇಳಿದ್ದೆ. ಅವಳು ಪ್ರಸಿದ್ಧ ನರ್ತಕಿಯೆಂಬುದು ನನಗೆ ತಿಳಿದ ವಿಷಯ. ಅವಳು ಹೆಸರಾಂತ ಕಲೋಪಾಸಕಿಯೆಂಬುದನ್ನೂ ತಿಳಿದಿದ್ದೆ. ಅವಳ ನೃತ್ಯವೆಂದರೆ ಆ ಕಾಲದಲ್ಲಿ ಜನರು ಹುಚ್ಚೆದ್ದು ನೋಡುತ್ತಿದ್ದರು. ಅವಳ ಸರಿಸಮರಾದ ನರ್ತಕಿಯೂ ಮತ್ತಾರೂ ಜನನವಾಗಲಾರರೆಂದು ಹೆಸರು ಗಳಿಸಿದ್ದಳು. ಈಗವಳು ಹಣ್ಣು ಮುದುಕಿಯಾಗಿರಬೇಕು. ಅವಳನ್ನು ಕಾಣುವ ಸುಯೋಗ ನನಗೊದಗಿತೆಂದು ನಾನು ಮನದಲ್ಲಿಯೇ ಹಿಗ್ಗಿದೆ. ನಾನು ಹನ್ನೆರಡು ವಯಸ್ಸಿನವನಿದ್ದಾಗ ಒಂದು ದಿನ ಅವಳು ನಾಟಕಗೃಹದಿಂದ ನೃತ್ಯ ಕಾರ್ಯಕ್ರಮ ಮುಗಿದನಂತರ ಓರ್ವ ಕವಿವರ್ಯನನ್ನು ಕೂಡಿಕೊಂಡು ಈ ಸುಂದರ ಪ್ರದೇಶಕ್ಕೆ ಹೋದಳಂತೆ. ಅವಳು ತನ್ನ ವೃತ್ತಿಯನ್ನು ತೊರೆದು ಕವಿಯ ಬೆನ್ನು ಹತ್ತಿದುದು ಅನೇಕರಿಗೆ ಸೇರಲಿಲ್ಲ. ಶ್ರೀಮಂತರಿಗೆ ಹುಚ್ಚುಹಿಡಿಯಿತು. ಆದರೆ ಯಾರಿಗೂ ಒಲಿಯದ ಈ ಕಲಾವಿದೆ ಕವಿಯ ಹೃದಯವನ್ನು ಮೆಚ್ಚಿ, ಅವನನ್ನು ಮದುವೆಯಾಗಿ ಇಲ್ಲಿ ಸುಖದಿಂದಿದ್ದಳಂತೆ. ಇವಳ ಜತೆಯಲ್ಲಿ ಆ ಕವಿಯು ರಚಿಸಿದ 'ವಿಜಯ' ವೆಂಬ ಕವಿತೆ ಆ ಕಾಲದ ಜನರಿಗೆ ಮಂಕು ಹಿಡಿಸಿತು. ಈ ಕಗ್ಗನ ಕವಿತೆ ಏಸು ಜನರಿಗೆ ಮೋಹಗೊಳಿಸಿತೆಂಬುದು

ಅವರ್ಣನೀಯ. 'ಎಟ್ವಾದ ತಗ್ಗುದಿನ್ನೆ' ಎಂಬ ಕವಿತೆಯನ್ನು ಅನೇಕ ಪ್ರೇಮಿಗಳು, ವಿಲಾಸಿಗಳು, ನವದಂಪತಿಗಳು ಆಡಿಕೊಂಡು ಕುಣಿದರಂತೆ. ಮದುವೆ, ಉತ್ಸವಗಳಲ್ಲಿ, ನೃತ್ಯಜಲಸೆಗಳಲ್ಲಿ ಈ ಎರಡು ಕವನಗಳಿಗೆ ಜನರು ಕುಣಿಕುಣಿದು ಹಿಗ್ಗುತ್ತಿದ್ದರಂತೆ.

ಈ ರೀತಿಯ ಕಾವ್ಯಗಂಗೆಯು ಝರಿಯಾಗಿ ಹರಿಯಲು ಕಾರಣಳಾದ ಈ ಜೂಲೀ ರೋಮೋಯು, ಕೆಲಕಾಲದ ನಂತರ ಆ ಕವಿವರ್ಯನು ಅಕಾಲ ಮೃತ್ಯುವನ್ನೈದಿದ ಕಾರಣದಿಂದ ಪ್ರತಿಭಾವಂತನಾದ ಸಂಗೀತರತ್ನನೋರ್ವ ನನ್ನು ಕೂಡಿ ಬಾಳಿದಳಂತೆ. ಈ ಕಲಾವಿದರ ಸಹವಾಸದಿಂದ ಇವಳ ಬಾಳು ನಿತ್ಯ ನೂತನತೆಯನ್ನು ಕಂಡಿತು. ಬಾಳಿನಲ್ಲಿ ಹೆಚ್ಚಿನ ಸುಖವನ್ನು ಕಂಡಳು. ಸವಿಯನ್ನುಂಡು ತನ್ನ ಇನಿಯರನ್ನು ತಣಿಸಿ ಗೋಂದಲದಲ್ಲಿ ಬೀಳದೆ ಅವರಿಬ್ಬರನ್ನು ಅಗಲಿ ಈಗ ತಾನೊಬ್ಬಳೇ ಈ ಇಳಿವಯಸ್ಸಿನಲ್ಲಿರು ವಳು. ಇಂತಹ ಕಲಾವಿದೆಯನ್ನು ಕಾಣದೆ ಹೋಗುವುದು ಕಲೆಗೆ ಅಪಚಾರ ವೆಂದು ಬಗೆದು, ಮನೆಯ ಹಿರಿಯ ಬಾಗಿಲನ್ನು ಸಮೀಪಿಸಿ 'ಕಾಲ್ ಬೆಲ್'ನ ಗುಂಡಿಯನ್ನು ಒತ್ತಿದೆ. ಮನೆಯ ಆಳು ಮನುಷ್ಯ ಬಂದ. ಅವನ ಕೈಯಲ್ಲಿ ನನ್ನ ಪರಿಚಯದ ಕಾರ್ಡನ್ನು ಮತ್ತು ಸಂದರ್ಶನದ ಉದ್ದೇಶವನ್ನು ಕೆಲವೇ ಮಾತುಗಳಲ್ಲಿ ಬರೆದುಕೊಟ್ಟೆ. ನನ್ನ ಹೆಸರು ಅವಳಿಗೆ ತಿಳಿದಿರಬೇಕೆಂದು ನಾನು ಊಹಿಸಿದೆ.

ಕೂಡಲೇ ಆ ಆಳುಮನುಷ್ಯ ಸಗುತ್ತ ಬಂದು ನನ್ನನ್ನು ಒಳಗೆ ಕರೆದು ಕೊಂಡು ಹೋದ. ನಾನು ಒಳಗೆ ಹೋದವನೇ ಆ ಕೋಣೆಯ ಅಂದವನ್ನು ಕಂಡು ಬೆರಗಾದೆ. ಆದರೆ ಆ ಕೋಣೆಯನ್ನು ಬಹಳ ದಿನಗಳಿಂದ ಉಪ ಯೋಗಿಸಿರಲಿಲ್ಲವೆಂದು ಕಂಡುಬಂತು. ಆ ಕೋಣೆಯನ್ನು, ಅಷ್ಟೇನೂ ರೂಪವತಿಯಲ್ಲಾಗಿರದ ಹದಿನಾರು ವರುಷದ ತರುಣಿ, ಆ ಕೋಣೆಯಲ್ಲಿಯ ಸಾಮಾನುಗಳನ್ನು ಸರಿಪಡಿಸುತ್ತಿರುವಂತೆ ಕಂಡುಬಂತು.

ಕೆಲಸಮಯದ ನಂತರ ನಾನೊಬ್ಬನೇ ಕೋಣೆಯಲ್ಲಿ ಕುಳಿತು ಕೋಣೆಯ ಗೋಡೆಗಳ ಮೇಲಿನ ಚಿತ್ರಗಳನ್ನು ನೋಡತೊಡಗಿದೆ. ದೊಡ್ಡ

ಮೂರು ಚಿತ್ರಗಳು ಎದುರಿಗೆ ತೂಗುಹಾಕಲ್ಪಟ್ಟಿದ್ದವು. ನಡುವೆ ಸುಂದರಳಾದ ಜೂಲೀ ರೋಮೋಯಳದಿದ್ದಿತು. ಎರಡೂ ಪಕ್ಕದಲ್ಲಿ ಅವಳ ಇಬ್ಬರು ಗಂಡಂದಿರ ಅದೇ ಆಕಾರದ ಚಿತ್ರಗಳಿದ್ದವು. ಜೂಲೀಯು ಬಹು ಸುಂದರವಾಗಿ ಅಲಂಕೃತಳಾಗಿದ್ದಳು. ಶ್ರೀಮಂತಿಕೆಯ ಕಳೆ ಎದ್ದು ಕಾಣುತ್ತಿತ್ತು. ಉಡುಗೆತೊಡುಗೆ ಅಂದಿನ ಅವಳ ವೈಭವವನ್ನು ಸಾರುತ್ತಿತ್ತು. ಆ ಎಳೆನಗು ಅವಳ ಮುಖದಲ್ಲೆದ್ದು ಕಾಣುತ್ತಿತ್ತು. ಆ ಚಿತ್ರ ಉತ್ತಮ ಕಲಾವಿದನ ಮೆಚ್ಚಿನ ಚಿತ್ರವಾಗಿತ್ತು. ಆ ಮೂರು ಚಿತ್ರಗಳು ಹಿಂದಿನ ಕಾಲದ ಆ ಜನರ ಸಂಸ್ಕೃತಿಯನ್ನು ಎತ್ತಿಹಿಡಿಯುವಷ್ಟು ವಿಶಿಷ್ಟತೆ ಉಳ್ಳವುಗಳಾಗಿದ್ದವು. ಮುಂದಿನ ಪೀಳಿಗೆಯ ಜನರಿಗೆ ಒಂದು ದಿವ್ಯ ಸಂದೇಶವನ್ನು ಸಾರುತ್ತಿದ್ದವು. ನಾನು ಆ ಚಿತ್ರಗಳನ್ನು ನೋಡುತ್ತ ಮೈಮರೆತೆ.

ಒಳಮನೆಯ ಬಾಗಿಲು ತೆರೆದ ಸಪ್ಪಳವಾಯಿತು. ಒಂದು ತೀರ ಸಣ್ಣ ವ್ಯಕ್ತಿಯು ನನ್ನೆಡೆಗೆ ಮೆಲ್ಲನೆ ಬರುವುದನ್ನು ಕಂಡೆ. ಅವಳ ಸಣ್ಣ ಆಕೃತಿ, ತೀರ ಹಣ್ಣಾದ ಮುಖದಲ್ಲಿ ಬಿಳಿಯಾಗಿ ಕಾಣುವ ಅವಳ ಹುಬ್ಬುಗಳು, ತಲೆ ಕೂದಲುಗಳು ಅವಳು ಅಂದು ಧರಿಸಿದ್ದ ತೀರ ಸಾದಾ ಬಿಳಿ ಉಡುಪಿಗೆ ಹೊಂದಿಕೊಂಡಿದ್ದವು. ಆದರೆ ಅವಳ ಹಾವ-ಭಾವಗಳಲ್ಲಿ ಚೈತನ್ಯವಿತ್ತು. ನೂತನತೆ ಇಲ್ಲದಿದ್ದರೂ ಅವಳು ವಯಸ್ಸಿನಿಂದ ಹೆಡ್ಡಳಾಗಿರಲಿಲ್ಲ. ಚತುರತೆ ಕಂಡುಬರುತ್ತಿತ್ತು. ತನ್ನ ಕೈಯನ್ನು ಮುಂದೆ ನೀಡುತ್ತ, ನಸುನಗುವಿನೊಂದಿಗೆ ಸ್ಪಷ್ಟ, ತಿಳಿ ಮತ್ತು ಸುನಾದದ ಸ್ವರದಲ್ಲಿ "ಮಹಾಶಯರೆ, ತಮ್ಮ ದರ್ಶನದಿಂದ ನನಗೆ ಸಂತೋಷವಾಯಿತು. ಗತಕಾಲದ ನಮ್ಮನ್ನು ಈಗಿನ ಕಲಾವಿದರು ನೆನೆಪಿನಲ್ಲಿಟ್ಟುಕೊಂಡುದುದಕ್ಕೆ ನಾನು ಧನ್ಯಳು. ಕಲೆಗೆಂದಿಗೂ ಸಾವಿಲ್ಲ ಎಂಬುದು ನನಗೆ ಈಗ ತಿಳಿದುಬಂತು. ಇದು ಸತ್ಯವಾದಮಾತು. ಸಂತೋಷ" ಎಂದಳು.

ಅವಳ ಕಲಾತ್ಮಕ ಜೀವನವೆಷ್ಟರದೆಂಬುದು ಆಗ ನನಗೆ ಅರಿವಾಯಿತು. ಇಬ್ಬರೂ ಕುಳಿತೆವು. ಆ ಕಲಾವಿದೆಯನ್ನು ಕಾಣುವ ನನ್ನ ಹಂಬಲವನ್ನರಿತು ಆ ಜಾಣೆ "ತಮ್ಮ ಪರಿಚಯದಿಂದ ಮತ್ತೆ ನಾನು ಕಲಾಲೋಕಕ್ಕೆ ಇಳಿಯುತ್ತಿರುವೆನು. ನನ್ನ ಹಿಂದಿನ ಸುಂದರ ಜೀವನದ ಸವಿಕನಸುಗಳೆಲ್ಲವೂ

ನೆನಪಾಗುತ್ತಿವೆ. ನಿಮ್ಮ ಕಲಾಪ್ರಿಯತೆಗೆ ನನ್ನ ಅಭಿವಂದನೆಗಳು. ನೀವೊಬ್ಬರಾದರೂ ನನ್ನನ್ನು ನೆನಪಿನಲ್ಲಿಟ್ಟುಕೊಂಡು ಈ ಪ್ರಾಂತಕ್ಕೆ ಬಂದಾಗ ನನ್ನನ್ನು ಕಾಣುವ ಕೃಪೆ ಮಾಡಿದಿರಿ. ಬಹಳ ಸಂತೋಷ. ನಮ್ಮಂತಹ ಮುದುಕರನ್ನು ಯಾರು ನೆನೆಯುವರು ? ಈಗಿನ ಜನರಿಗೆ ನಮ್ಮಿಂದೇನಾಗ ಬೇಕು ? ನಿಜ. ಆದರೆ ನಮ್ಮ ಕಲಾಸೇವೆಯ ಮಹತ್ವವನ್ನರಿತ ಕಲಾವಿದನು ನಮ್ಮನ್ನು ಮರೆಯಲಾರ. ಆಯಿತು. ನಮ್ಮ ಕಾಲ ಮುಗಿಯಿತು. ನಾನು ಸತ್ತೆನೆಂದರೆ ಮೂರು ದಿನಗಳವರೆಗೆ ಪತ್ರಿಕೆಗಳು ನನ್ನ ಗುಣಗಾನ ಮಾಡುವವು. ಅನಂತರ ಜನರು ನಮ್ಮನ್ನು ಮರೆತುಬಿಡುವರು. ಆದರೆ ಕಲಾವಿದನ ನೆನಪು ಉಳಿಯುವಂತೆ ಕಲಾಸೇವೆಯಲ್ಲಿ ನಿರತರಾಗುವ ಜನರು ಬೇಕು. ನಿಮ್ಮಂತಹ ಸಹೃದಯದ, ರಸಿಕರ ವೃಂದಗಳು ಇಂತಹ ಕೆಲಸವನ್ನು ಕೈಕೊಳ್ಳಬೇಕು. ಕಲಾವಿದನು ಜೀವಂತ ಇರುವಾಗಲೇ ಅವನ ಕಲೆಯು ಅಳಿಯದಂತೆ ಏನಾದರೂ ಮಾಡಬೇಕು'' ಎಂದು ಆವೇಶಪೂರ್ಣವಾಗಿ ನುಡಿದ ಆವಳ ಮಾತುಗಳನ್ನು ನಾನು ಮೌನದಿಂದ ಕೇಳತೊಡಗಿದೆ.

ಅವಳು ಮಾತನಾಡುತ್ತ ಗೋಡೆಯಮೇಲೆ ತೂಗುಹಾಕಿದ ಚಿತ್ರಗಳ ಕಡೆ ನೋಡಿದಳು. ಅವಳ ಕಣ್ಣಲ್ಲಿ ತಾನಾಗಿಯೇ ನೀರೂರಿದವು. ಅವಳನ್ನು ಕಂಡು ನನಗೂ ಪರಿತಾಪ ಉಂಟಾಯಿತು. ಆ ಕಲಾವಿದೆಯ ಪರಿಸ್ಥಿತಿ, ನೀರಿನಲ್ಲಿ ಬಿದ್ದು ಈಜುವುದನ್ನು ತಿಳಿಯದೆ ಮುಳುಗುವವನಂತಿತ್ತು. ಹೊರಗೆ ನವಯುವಕರು, ನೂತನ ಉತ್ಸಾಹದಿಂದ, ತಮ್ಮ ವಯಸ್ಸಿನಿಂದ ಮತ್ತು ಐಶ್ವರ್ಯದ ಹೆಮ್ಮೆಯನ್ನು ವ್ಯಕ್ತಪಡಿಸುತ್ತ ಕೋಚುಗಾಡಿಗಳಲ್ಲಿ ಕುಳಿತು ನಲಿಯುವ, ಕೆಲಿಯುವ ದೃಶ್ಯ ಕಣ್ಣಿಗೆ ಕಂಡಿತು. ನೈಸ್‌ದಿಂದ ಮೌಂಟೆ ಕಾರ್ಲೊಕ್ಕೆ ವಿಲಾಸಿಗಳು ಹೋಗುತ್ತಿರುವ ಆ ರಭಸದ ದೃಶ್ಯವನ್ನು ನಾನು ದಿಟ್ಟಿಸಿ ನೋಡುತ್ತಿರುವುದನ್ನು ಅವಳು ಕಂಡು ನನ್ನ ಮನೋವೇದನೆಯನ್ನು ಗುರುತಿಸಿ ''ಮಹಾಶಯರೆ, ಅವರು ಇಂದು ಯುವಕರು. ನಾಳೆ ಮುಪ್ಪು ಬಂದಾಗ ಅವರಿಗೆ ತಿಳಿಯುವದು" ಎಂದಳು.

"ಅಂದು ನಿಮಗೆ ಆ ಜೀವನ ಆನಂದವನ್ನುಂಟುಮಾಡಿರಬೇಕಲ್ಲವೇ?" ಎಂದು ಕೇಳಿದೆ.

"ನಿಜ, ನಿಜ. ಆ ಆನಂದ ಇಲ್ಲಿಯ ವರೆಗೂ ಇರುವುದು ಸಾಧ್ಯವೆ?" ಎಂದು ಹೇಳಿದಳು. ಮುಂದೆ ಅವಳು ನಾನು ಕೇಳಿದ ಪ್ರಶ್ನೆಗಳಿಗೆಲ್ಲ ತನ್ನ ಹಿಂದಿನ ಜೀವನದ ವಿವರಗಳನ್ನೊಳಗೊಂಡ ಮಾರುತ್ತರಗಳನ್ನು ಹೆಚ್ಚಿನ ಹುಮ್ಮಸದಿಂದ ಹೇಳತೊಡಗಿದಳು. ತನ್ನೆಲ್ಲ ಜೀವನದ ಸೊಬಗಿನ ಚಿತ್ರವನ್ನು, ವಿಲಾಸಮಯಕಾಲದ ವಿಚಿತ್ರಗಳನ್ನು, ಜಗತ್ತನ್ನೇ ಮರುಳು ಮಾಡಿದ ಅವಳ ನೃತ್ಯದ ಮಹಿಮೆಗಳನ್ನು ವಿವರಿಸಿದಳು. ಅವುಗಳೆಲ್ಲವನ್ನೂ ಉತ್ಸುಕತೆಯಿಂದ ಕೇಳುತ್ತ "ತಾವು ಇಷ್ಟು ಯಶಸ್ಸುಗಳಿಸಿದುದು ನಾಟಕ ಮತ್ತು ರಂಗಭೂಮಿಯಿಂದ ತಾನೆ?" ಎಂದು ಕೇಳಿದೆ.

"ಇಲ್ಲ ಮಹಾಶಯ, ಇಲ್ಲ" ಎಂದಳು.

ಆ ಮಾತಿನೊಂದಿಗೆ ನಾನವಳ ದೃಷ್ಟಿಯನ್ನು ಚಿತ್ರಗಳಕಡೆ ಸೆಳೆದೆ. ನನ್ನ ಸೂಚನೆಯನ್ನು ಎತ್ತಿಹಿಡಿದು, ಅತ್ತ ನೋಡುತ್ತ "ಅವರಿಬ್ಬರೇ ನನ್ನನ್ನು ಈ ಸುಖದ ಅಂತಸ್ತಿನಲ್ಲಿರಿಸಿದವರು" ಎಂದ ಮಾತಿಗೆ ನಾನು "ಇವರಿಬ್ಬರಲ್ಲಿ ನಿಮಗೆ ಯಾರು ಹೆಚ್ಚು ಸುಖವನ್ನುಂಟುಮಾಡಿದವರು?" ಎಂದು ಕೇಳಿದೆ.

"ಏಕೆ, ಇಬ್ಬರೂ ನನಗೆ ಸಮಾನರೇ. ಇಬ್ಬರೂ ನನ್ನ ಕಲೆಗೆ ಪೋಷಣೆಯನ್ನಿತ್ತು ಸಂತೈಸಿದರು. ಅವರಬ್ಬರೂ ನನ್ನನ್ನು ಬಲು ಮಮತೆ ಯಿಂದ ಪ್ರೀತಿಸಿದರು.

"ಅಂದರೆ ನೀವು ಅವರು ವ್ಯಕ್ತಿಗಳೆಂದು ಪ್ರೀತಿಸಲಿಲ್ಲ ಅಂದ ಹಾಗಾಯಿತು. ನಿಮ್ಮನ್ನು ಬಂಧಿಸಿದುದು ಪ್ರೇಮವು, ಕಾಮವ್ಯಾಪಾರವಲ್ಲ. ನಿಮ್ಮ ಕಲೆಗೆ ಮತ್ತು ನಿಸ್ಪೃಹ ಜೀವನಕ್ಕೆ ಅವರು ತನುಮನವನ್ನೇ ಅರ್ಪಿಸಿದ್ದರು. ಸ್ನೇಹಪ್ರೇಮದಿಂದ ನಿಮ್ಮನ್ನು ಅವರಿಬ್ಬರೂ ಆರೈಸಿದರು. ಒಬ್ಬನು ಕಾವ್ಯೋಪಾಸಿ; ಇನ್ನೊಬ್ಬನು ಕಲೋಪಾಸಿ; ಸ್ವತಃ ಗಾಯಕನು. ಒಬ್ಬನು ತನ್ನ ಕಾವ್ಯದಿಂದ ನಿಮ್ಮ ಮನವನ್ನು ತಣಿಸಿದರೆ, ಮತ್ತೊಬ್ಬನು ಸುಂದರ ಗಾನದಿಂದ ನಿಮಗೆ ಸುಖವನ್ನುಂಟುಮಾಡುತ್ತಿದ್ದನು. ಅವರು ಬಾಹ್ಯ ಜಗತ್ತಿಗೆ ವೈರಿಗಳೆನಿಸಿದರೂ, ಅಂತಃಕರಣ ಪೂರ್ವಕವಾಗಿ ನಿಮಗೆ ಮಾನಸಿಕ ಆಹ್ಲಾದವನ್ನೊದಗಿಸಿದರು. ನಿಮ್ಮ ಕಲೆಗೆ ಮನಸೋತು ತಮ್ಮ ಸರ್ವಸ್ವವನ್ನು ಅರ್ಪಿಸಿ ಇಹ

ದಲ್ಲಿ ಸುಖಪಡೆದರು. ಆದರ್ಶ ಜೀವನದಿಂದ ನಿಮಗೆ ಯೋಗಾನಂದವನ್ನೊದಗಿಸಿದರು. ಭೋಗಪ್ರಿಯರಾಗದೆ ಕಲಾರಾಧಕರಾಗಿ ನಿಮ್ಮಿಂದ ಕಲಾಸೇವೆಯಾಗುವಂತೆ ಸಹಕರಿಸಿದರು."

ನನ್ನ ಮಾತುಗಳು ಅತ್ಯಾನಂದವನ್ನುಂಟುಮಾಡಿದವು. ವಯಸ್ಸಾಗಿದ್ದರೂ ನನ್ನ ಸಹಾನುಭೂತಿಪರ ಮಾತುಗಳು ಆಕೆಯಲ್ಲಿ ಹೊಸ ಚೈತನ್ಯವನ್ನುಂಟುಮಾಡಿದವು. ಅವಳು ಆವೇಶದಿಂದ ಗಟ್ಟಿಯಾಗಿ ಎತ್ತಿದ ಸ್ವರದಲ್ಲಿ "ನಿಮ್ಮ ಮಾತು ಅಕ್ಷರಶಃ ನಿಜ. ಕಲೆಯನ್ನರಿತು, ಕಲಾಜೀವಿಗಳ ಅನುಭವವನ್ನರಿತ ನಿಮ್ಮ ಊಹೆ ಸರಿಯಾದುದೇ. ಅವರಿಬ್ಬರು ನನಗೆ ಶರೀರಸುಖವನ್ನು ಹೆಚ್ಚು ಕೊಡದಿದ್ದರೂ ಅವರ ಆ ತ್ಯಾಗ, ಆ ಸಹಾನುಭೂತಿ, ನನ್ನ ಕಲೆ ಮುಂದರಿಸಲು ಸಹಕರಿಸಿದ ಅವರ ಅಂತಃಕರಣಹೃದಯ ಮತ್ತಾರಲ್ಲಿಯೂ ನಾನು ಕಾಣುತ್ತಿರಲಿಲ್ಲ. ಇಡಿ ಪ್ರಪಂಚದಲ್ಲಿಯೇ ಅಂತಹ ಮಿತ್ರರು ನನಗೆ ದೊರೆಯುತ್ತಿರಲಿಲ್ಲ. ಅವರ ಕಾವ್ಯ, ಸಂಗೀತ ನನ್ನ ಕಲೆಗೆ ಸಮತೂಕವಾದ ನೆರವನ್ನು ನೀಡಿದವು. ವಿಶ್ವದ ಅನುಭವವನ್ನು, ಪ್ರೇಮ ಸಾಮ್ರಾಜ್ಯವನ್ನು. ಪ್ರಕೃತಿಯ ಸರ್ವವ್ಯಾಪ್ತಿಯನ್ನು ನನಗೆ ತಮ್ಮ ಕಾವ್ಯ ಮತ್ತು ಸಂಗೀತಗಳೆಂಬ ಸಾಧನಗಳಿಂದ ನೀಡಿದರು. ಇಂತಹ ನೆರವು ನನಗೆ ಮತ್ತಾರಿಂದಲೂ ದೊರೆಯುತ್ತಿರಲಿಲ್ಲ. ಅವರು ನನಗೆ ನೀಡಿದ ಸುಖ ಸ್ವರ್ಗಕ್ಕಿಂತಲೂ ಹೆಚ್ಚಿನದಾಗಿತ್ತು. ಇದನ್ನು ಕೆಲವರು ನಿರ್ಜೀವ ಸಾಹಿತ್ಯ, ಜಳ್ಳವೆ ನಿಸ್ತೇಜ ಕಲೆ ಎಂದೆನ್ನಬಹುದು. ಆದರೆ ನನಗೆ ಮಾತ್ರ ಜೀವನದ ರಸಿಕತೆ, ಬದುಕಿನ ಆಂತರಿಕ ಸುಖ, ಕಲೆಯ ಪೂರ್ಣ ಅನುಭವ ಅವರ ಸುಖಕರ ಸಹವಾಸದಲ್ಲಿ ದೊರೆಯಿತು. ಅವರ ಸಹವಾಸದಿಂದ ನಾನು ಊಹಾಜಗತ್ತಿನಲ್ಲಿ ವಿಹರಿಸಿದೆ; ಮೇಘಮಂಡಲದಲ್ಲಿ ಬಾಳಿ ಬೆಳೆದೆ; ಗಗನದ ರಂಗುರಂಗಿನ ಠಾವಿನಲ್ಲಿ ವಿಹರಿಸಿದೆ; ಅಲ್ಲಿಯ ಅವಿನಾಶ ಪ್ರೇಮರಾಜ್ಯದಲ್ಲಿ ಮನದಣಿಯ ಸಂಚರಿಸಿ ಸುಖವನ್ನನುಭವಿಸಿದೆ. ನನಗಿನ್ನೇನುಬೇಕು? ಈ ಪ್ರಣಯದೂತರು ಕೇವಲ ಶರೀರ ಸುಖಕ್ಕೆಂದು ನನ್ನೆಡೆಗೆ ಬರಲಿಲ್ಲ. ನನ್ನಲ್ಲಿಯ ಕಲೆಯ ನಿಜರೂಪವನ್ನು ತಿಳಿದು, ನನಗೆ ತಿಳಿಯದ ಆ ತಮ್ಮ ಕಲೆಯ ಸ್ವರೂಪವನ್ನು ತಿಳಿಸಿ, ನನ್ನ ಅನುಭವವನ್ನು ಹೆಚ್ಚಿಸಿ ನನ್ನನ್ನು ಪೂರ್ಣ ಕಲಾವಿದೆ

ಯನ್ನಾಗಿ ಮಾಡಿದರು. ಅವರಿಂದ ನಿಜಪ್ರೇಮವೇನೆಂಬುದನ್ನು ತಿಳಿದೆ ಎಂದು ಆವೇಶದಿಂದ ತನ್ನ ಶಕ್ತಿಯೆಲ್ಲವನ್ನುಪಯೋಗಿಸಿ ಮಾತನಾಡುವಾ ಅವಳು ಪರವಶಳಾದಳು. ಕಣ್ಣೀರು ಹರಿಯತೊಡಗಿದವು. ನನಗೆ ಅವ ಈ ಸ್ಥಿತಿಯನ್ನು ನೋಡಲಾಗಲಿಲ್ಲ. ಆವೇಶದಿಂದ ನಾನು ಬೇರೊಂದುಕಡೆ ತಲೆತಿರುವಿ ಕಿಟಕಿಯಲ್ಲಿ ದೂರ ನೋಡುತ್ತಿರಲು, ಮತ್ತೆ ತಾನು ಮಾತನ್ನು ಮುಂದರಿಸಿದಳು.

“ಕೆಲವರಲ್ಲಿ ದಾಂಪತ್ಯ ಜೀವನದಲ್ಲಿ ವರುಷಗಳುರುಳಿದಂತೆಲ್ಲ ಅವರಲ್ಲಿ ಅನುರಾಗವು ಕಡಿಮೆಯಾಗಬಹುದು. ಆದರೆ ಅವರು ಈಗ ಶರೀರದಿಂದ ದೂರಾಗಿದ್ದರೂ, ಈಗ ನನ್ನ ವಯಸ್ಸು ಎಪ್ಪತ್ತಾದರೂ ನಾನು ಇಪ್ಪತ್ತು ವರುಷದ ಯುವತಿಯಂತೆ ಅವರನ್ನು ನೆನೆಯಬಲ್ಲೆ. ನನ್ನ ಮಾನಸಿಕ ಶಕ್ತಿ ದೃಢವಾಗುತ್ತಿದೆ. ಮನೋ ದೃಷ್ಟಿಯಲ್ಲಿ ವಿಕಾಸ ಕಂಡು ಬರುತ್ತಿದೆ. ಆ ವಿಕಾಸವೇ ನನಗೆ ಅತುಲ ಶಕ್ತಿಯನ್ನು ತಂದಿರಿಸಿದೆ. ಆದ್ದರಿಂದಲೇ ಈ ವನಾಂತರದ ನಡುವೆ ಇರುವ ಈ ಮನೆಯಲ್ಲಿ ಒಂಟಿಯಾಗಿ ಇರುವ ಧೈರ್ಯ ಬಂದಿದೆ”.

ಮುಂದೆ ಸ್ವಲ್ಪ ಸಮಯ ಅವಳು ಸುಮ್ಮನಿದ್ದಳು. ಅವಳು ಆವೇಶ ದಿಂದ ದಣಿದಿದ್ದಳು. ಚೇತರಿಸಿಕೊಂಡ ನಂತರ ನಗುನಗುತ್ತ “ನನ್ನ ಮುಂದಿನ ಕತೆಯನ್ನು ಕೇಳಿದರೆ ನಿಮಗೆ ನಗುಬರುವುದು. ಸಂಜೆ ಸಮಯ ಮತ್ತು ಕೆಲವು ಸುಂದರ ಬೆಳುದಿಂಗಳ ರಾತ್ರಿಗಳನ್ನು ಹೇಗೆ ಕಳೆಯುವೆನೆಂಬ ದನ್ನು ನಿಮಗೆ ತಿಳಿಸಿದರೆ ಹುಚ್ಚಳೆಂದು ನೀವು ಹಾಸ್ಯಮಾಡಬಹುದು. ನಿಸರ್ಗದಲ್ಲಿಯ ಸೊಬಗು ನನ್ನಲ್ಲಿ ಹುರುಪನ್ನುಂಟುಮಾಡುತ್ತದೆ. ಹೀಗೆ ಉದ್ವೇಗದಿಂದ ನಾನು ವರ್ತಿಸುವುದು ನನಗೇ ಅರ್ಥವಾಗುತ್ತಿಲ್ಲ. ಆದರೆ ನನ್ನ ಆ ವರ್ತನೆ ನನಗೆ ಸುಖವನ್ನೀಯುವುದರಿಂದ ಅನುಸರಿಸುತ್ತಲಿದ್ದೇನೆ” ಎಂದಳು.

ಅವಳ ಮುಂದಿನ ಕತೆಯನ್ನು ಕೇಳುವ ಕುತುಹಲವೇನೋ ಇತ್ತು, ಆದರೆ ಉಪಾಯದಿಂದ ಅವಳಿಂದಲೇ ಹೇಳುವ ಹೇಳಿಸುವ ಕಾರಣದಿಂದ ನಾನಿನ್ನು ಬರುವೆನೆಂದು ಎದ್ದುನಿಂತೆ. ಆಗ ಅವಳು “ಇಷ್ಟೇಕೆ ಅವಸರ?

ಇಂದು ಹೊತ್ತಾಗಿದೆ, ನನ್ನಲ್ಲಿಯೇ ರಾತ್ರಿ ಊಟ ಮುಗಿಸಿಹೋಗಬೇಕು" ಎಂದು ಕೇಳಿಕೊಂಡಳು.

ನನ್ನ ಸಮ್ಮತಿಯನ್ನು ಸೂಚಿಸಿದೆ. ಅವಳಿಗೆ ಹೆಚ್ಚಿನ ಸಂತೋಷ ವಾಯಿತು. ಆಳನ್ನು ಕರೆದು ಊಟದ ವ್ಯವಸ್ಥೆಯ ಬಗ್ಗೆ ಹೇಳಿ ತನ್ನ ಮನೆ ಯನ್ನು ತೋರಿಸಲು ನನ್ನನ್ನು ಒಳಗೆ ಕರೆದುಕೊಂಡುಹೋದಳು. ಅವಳ ಮನೆ ಸುಂದರವಾಗಿತ್ತು. ಊಟದ ಮನೆಯ ಹಿಂದುಗಡೆ ದೊಡ್ಡ ವರಾಂಡ ಇತ್ತು. ಆದರೆ ಅದು ಗ್ಲಾಸಿನ ಚೌಕಟ್ಟುಗಳಿಂದ ಆವರಿಸಲ್ಪಟ್ಟಿತ್ತು. ಒಂದು ಮೂಲೆಯಲ್ಲಿ ಸಣ್ಣ ಆಸನವೊಂದು ನಿರ್ಮಿತವಾಗಿತ್ತು. ಈ ಜಾಗೆ ಯಲ್ಲಿ ಅವಳು ಊಟದ ನಂತರ ಕುಳಿತು ಅಲ್ಲಿಂದ ಕಾಣುವ ತನ್ನ ವನಾಂತ ರದ ಮತ್ತು ದೂರ ಕಾಣುವ ಗುಡ್ಡಗಾಡುಗಳ ಚೆಲುವನ್ನು ಕಂಡು ಆನಂದ ದಲ್ಲಿ ಹೊತ್ತು ಕಳೆಯುತ್ತಿದ್ದಳೆಂದು ನನಗೆನಿಸಿತು. ಪ್ರಕೃತಿದೇವಿಯ ಚಿತ್ರ ಗಳನ್ನು ನೋಡಿ ಆನಂದವನ್ನು ಪಡೆದು ತನ್ನ ಇಳಿವಯಸ್ಸನ್ನು ಸುಖದಲ್ಲಿ ಕಳೆಯಬೇಕೆಂಬ ಅವಳ ದಾಹವೆಂತಹದೆಂಬುದು ಅರಿವಾಯಿತು.

ನಾವು ಮುಂದೆ ತೋಟದಲ್ಲಿ ಪ್ರವೇಶಮಾಡಿದೆವು. ಅಲ್ಲಿಯ ಹೂಗಳು ಅಮಿತಾನಂದದ ಸುವಾಸನೆಯನ್ನು ಬೀರುತ್ತಿದ್ದವು. ಅಂದೇಕೋ ಹೆಚ್ಚು ಸುಖಕರವಾಗಿತ್ತು. ಕತ್ತಲು ಮೆಲ್ಲಮೆಲ್ಲನೆ ಆವರಿಸತೊಡಗಿತು. ನಮ್ಮ ದೇಹವು ಅಂದಿನ ನಿಸರ್ಗದ ಸೊಬಗಿಗೆ ಮನಸೋಲುವಂತೆನಿಸಿತು. ನಿಜ ವಾಗಿಯೂ ಆ ಆನಂದದಲ್ಲಿ ನಾವು ಮೈಮರೆತೆವು. ಕೊಂಚ ತೋಟದಲ್ಲಿ ಅಡ್ಡಾಡಿ ಬಂದು ನಮ್ಮ ಊಟಕ್ಕೆಂದು ಏರ್ಪಡಿಸಿದ ಟೇಬಲಿನ ಮುಂದೆ ಕುಳಿತೆವು. ನಮ್ಮ ಉಲ್ಲಾಸದಿಂದ ಅಂದಿನ ಊಟ ಬಹು ರುಚಿಕರವೆನಿಸಿತು. ಊಟ ನಿಧಾನವಾಗಿಯೇ ಸಾಗಿತು. ನಮ್ಮಿರ್ವರ ನಡುವೆ ಹೆಚ್ಚಿನ ಸ್ನೇಹ ಬೆಳೆದಂತೆನಿಸಿತು. ಆ ಮುದುಕಿಯ ಬಗ್ಗೆ ನನ್ನಲ್ಲಿ ಎಂದೂ ಇಲ್ಲದ ಮಮತೆ ಮನೆಮಾಡಿಕೊಂಡಿತು. ಅವಳು ಮಾದಕ–ಪಾನೀಯದ ಲೋಟವನ್ನು ಬರಿದಾಗಿಸಿದ ನಂತರ ಅದರ ಸ್ವಲ್ಪ ಆವೇಶದಲ್ಲಿ ತನ್ನ ಜೀವನದ ರಹಸ್ಯ ಗಳೆಲ್ಲವನ್ನೂ ಹೇಳತೊಡಗಿದಳು. ಅವಳ ಮಾತಿನ ಚುರುಕು, ಸನ್ನಿವೇಶ ಗಳನ್ನು ವಿವರಿಸುವಶಕ್ತಿ, ನನ್ನನ್ನು ಬೆರಗುಗೊಳಿಸಿದವು.

ಮೆಲ್ಲನೆ ಊಟದ ಮೇಜಿನಿಂದೇಳುತ್ತ "ಈ ಬೆಳದಿಂಗಳ ರಾತ್ರಿ ಬಹಳ ಅಂದವಾಗಿದೆ. ನಾವೂ ಕೊಂಚ ಹೊರಗೆ ಹೋಗಿ ಬರೋಣವೆ? ನನಗೆ ಚಂದಿರನೆಂದರೆ ಮಮತೆ ಹೆಚ್ಚು. ನನ್ನ ಚೆಲ್ಲಾಟ ಜೀವನದ ಸಂತೋಷ ಸನ್ನಿವೇಶಗಳಿಗೆ ಅವನೇ ಸಾಕ್ಷಿಯಾಗಿ ನಿಂತು ನನಗೆ ಬೇಕಾದ ಪ್ರೋತ್ಸಾಹವನ್ನು ನೀಡಿರುವನು. ಈ ಇಳಿವಯಸ್ಸಿನಲ್ಲಿಯೂ ನನ್ನ ಸುಖದ ದಿನಗಳನ್ನು ನೆನೆದುಕೊಳ್ಳಬೇಕಾದರೆ ಇವನೇ ನನಗೆ ಸಹಾಯಕನು. ಇವನಿಂದಲೇ ನನಗೆ ಸ್ಫೂರ್ತಿ ದೊರೆಯುವುದು. ಇಂತಹ ಪ್ರಶಾಂತ ವಾತಾವರಣದಲ್ಲಿ ನಾನು ಮೈಮರೆತು ಹುಚ್ಚಳಂತೆ ವರ್ತಿಸುತ್ತಿರುವ ರೀತಿಯನ್ನು ನಿಮಗೆ ಹೇಳಿದರೆ ಸುಮ್ಮನೆ ನಕ್ಕು ಬಿಡುವಿರಿ. ಎಲ್ಲವನ್ನೂ ಹೇಳಿ ಬಿಡಲೇ? ಇಲ್ಲ....ಇಲ್ಲ....ನಾನು ಹೇಳಲಾರೆ" ಎಂದು ಸುಮ್ಮನಾದಳು.

ಅವಳ ಮುಂದಿನ ರಹಸ್ಯ ವಿಷಯವೇನೆಂಬುದನ್ನು ತಿಳಿಯಲು ನನಗೆ ಆಶೆಯಿತ್ತು. "ತಾಯೀ, ಆ ಗುಟ್ಟಿನ ವಿಷಯವೇನೆಂಬುದನ್ನು ತಿಳಿಸಿಬಿಡಿ. ನಾನು ನಗುವದಿಲ್ಲ. ಖಂಡಿತವಾಗಿಯೂ ನಗುವದಿಲ್ಲ" ಎಂದು ಹೇಳಿದೆ.

ಆದರೂ ಆ ಮುದುಕಿ ಸುಮ್ಮನಿದ್ದುದನ್ನು ಕಂಡು, ಅವಳ ಕೈಗಳೆರಡನ್ನೂ ಎತ್ತಿಹಿಡಿದು ಮೆಲ್ಲಗೆ ಒಂದೆರಡು ಸಲ ಅವಳ ಮೃದುಹಸ್ತಗಳನ್ನು ಮುದ್ದಿಸಿದೆ. ಅವಳು ಆವೇಶಪರಳಾದಳು. ಆದರೂ ಮೌನ. ಮತ್ತೆ ಕೊಂಚ ಯೋಚಿಸಿ "ನೀವು ನಗುವುದಿಲ್ಲ ತಾನೆ?" ಎಂದು ಕೇಳಿದಳು.

"ಇಲ್ಲ ನನ್ನಾಣೆಯಾಗಿಯೂ ಇಲ್ಲ".

"ಆದರೆ ಇತ್ತ ಬನ್ನಿ" ಎಂದು ಎದ್ದುನಿಂತು ನನ್ನ ಕೈಯ ಆಸರದಿಂದ ಕೊಂಚ ಮುಂದೆಸಾಗಿ, ತನ್ನ ಆಳುಮನುಷ್ಯನ ಕಿವಿಯಲ್ಲಿ ಏನನ್ನೋ ನನಗೆ ಕೇಳಿಸದಂತೆ ಹೇಳಿದಳು. ಅವನು ಹಾಗೇ ಆಗಲೆಂದು ಒಪ್ಪಿದ. ಆನಂತರ ನಾವು ಇಬ್ಬರೂ ತೋಟದತ್ತ ಕಿತ್ತಲೆ ಹಣ್ಣಿನ ಗಿಡಗಳ ಸಾಲಿನಲ್ಲಿ ಬಂದು ನಿಂತೆವು. ಆಗಿನ ಆ ಚೆಲುವಾದ ಸನ್ನಿವೇಶ ರೋಮಾಂಚಕಾರಕವಾಗಿತ್ತು. ಎತ್ತರವಾಗಿ ಬೆಳೆದುನಿಂತ ದೂರದ ಗಿಡಗಳೊಳಗಿಂದ ಹಾದು ಬರುವ ಬೆಳ್ಳಗಿನ ಚಂದ್ರನ ಕಿರಣಗಳು ನೆಲದ ಮೇಲಿನ ಹಳದಿ ಉಸುಕಿನ ಮೇಲೆ ಬಿದ್ದ ಆ ದೃಶ್ಯವು ಅತಿ ಮನೋಹರವಾಗಿತ್ತು. ಗಿಡಗಳು ತುಂಬು ಗರ್ಭಿಣಿ

ಯಂತೆ ಕುಲುಕುಲು ಸಲಿಯುತ್ತಿದ್ದವು. ಮೇಲೆ ಆ ಹುಣ್ಣಿಮೆ ಚಂದ್ರನ ಬೆಳ್ಳಗಿನ ಬೆಳಕು ಅತಿ ಮನೋಹರವಾಗಿತ್ತು.

"ನೂತನ ನವ ದಂಪತಿಗಳಿಗೂ, ಪ್ರೇಮಿಗಳಿಗೂ, ಇಂದೆಂತಹ ಸುಮಧುರ ದಿನ?" ಎಂದು ನಾನು ಆವೇಶದಿಂದ ನುಡಿದೆ.

ಅವಳು ನಗುತ್ತ "ಅಹುದು. ಸಂದೇಹವೇನು? ಆ ದೃಶ್ಯವನ್ನೂ ನೀವು ಈಗ ಕಾಣಬಹುದು. ಇಂತಹ ವಾತಾವರಣದಲ್ಲಿ ಕೋಣೆಯಲ್ಲಿ ಮಲಗುವ ದಂಪತಿಗಳಿಗೆ ಮೂರ್ಖರೆಂದೆನ್ನಬೇಕು. ದೇವನೇತಕ್ಕೆ ಇಂತಹ ಸನ್ನಿವೇಶಗಳನ್ನು ನಿರ್ಮಿಸಿರುವನೆಂಬುದು ಅವರ ಹೃದಯಗಳಿಗೇನು ವಿದಿತವಾಗುವುದು. ನನ್ನ ಹಿಂದಿನ ನೆನಪುಗಳು ಈಗಲೂ ನನ್ನಲ್ಲಿ ವಿಕಾರವನ್ನುಂಟುಮಾಡುತ್ತವೆ. ಈಗಿನ ಜನರಲ್ಲಿ ಅಂತಹ ಭಾವನೆಗಳೇ ಇಲ್ಲ. ಅದರಲ್ಲಿಯೂ ಹೆಣ್ಣಿನ ಹೃದಯವನ್ನರಿಯುವ ಕರುಣಾರಸ, ಆ ಪ್ರೇಮದಾಹ ನಿಮ್ಮಲ್ಲಿ—ಗಂಡಸರಲ್ಲಿ—ಇಲ್ಲವೇ ಇಲ್ಲ. ಜಗತ್ತನ್ನು ಹಣದ ಪ್ರಮಾಣದಲ್ಲಿ ಅಳೆಯುವ ಸ್ವಭಾವ ನಿಮ್ಮದು. ವ್ಯಾಪಾರಿಗಳು ನೀವು. ನಮ್ಮೊಂದಿಗೆ ಮಾತನಾಡುವುದು ಸಹಾ ತಿಳಿಯದು ನಿಮಗೆ. ಎಳೆಯ ಹೆಣ್ಣುಗಳ ತಿಳಿ ಹೃದಯವನ್ನರಿಯುವ ಚೇತನ ನಿಮ್ಮಲ್ಲಿಲ್ಲ—ಈಗಿನ ಯುವಕರಂತೂ ಕೇವಲ ಮೂರ್ಖರೆಂದರೆ ತಪ್ಪಲ್ಲ – ಕ್ಷಮಿಸಿ. ನಮಗೆ ಉಡುಗೆತೊಡುಗೆಗಳನ್ನು ಕೊಂಡುಕೊಟ್ಟರೆ ಆಯಿತೆಂದು ತಿಳಿದು ಬಿಡುವ ನಿಮ್ಮ ದಡ್ಡತನಕ್ಕೇನನ್ನಬೇಕು? ನೀವು ಇಚ್ಛಿಸಿದ ಹೆಣ್ಣಿನ ಅರಿವೆ ಮತ್ತು ಸೊಗಸಿನ ವಸ್ತುಗಳ ಬೆಲೆ ಹೆಚ್ಚಾಯಿತೆಂದರೆ ನೀವು ಮಾರಿ ತಪ್ಪಿಸಲೆತ್ನಿಸುವಿರಿ? ಆದರೆ ಪ್ರತಿ ಹೆಣ್ಣಿಗೂ ಹೃದಯವಿದೆ; ಮಾನ—ಮರ್ಯಾದೆಯಿಂದ ಬಾಳಿ ಕಾವು ರಾಜ್ಯಕ್ಕಿಂತಲೂ ಪ್ರೇಮರಾಜ್ಯದಲ್ಲಿ ವಿಹರಿಸಲು ಬಯಸುವಳೆಂಬ ಮುಖ್ಯ ವಿಷಯವನ್ನೇ ಮರೆಯುವಿರಿ. ಇದೇತಾನೆ ನೀವು ವ್ಯಕ್ತಮಾಡುವ ಪ್ರೀತಿ, ಪ್ರೇಮ? ಹಣದಿಂದ ಪ್ರೇಮವನ್ನು ಅಳೆಯುವುದು ಕೇವಲ ಹೆಡ್ಡತನ, ಅನಾಗರಿಕರ ಲಕ್ಷಣ" ಎಂದು ಆವೇಶದಿಂದ ನುಡಿಯುತ್ತ, ಅವಳು ನನ್ನ ಕೈಯನ್ನು ಎತ್ತಿಹಿಡಿದು "ಅಲ್ಲಿ ನೋಡಿ" ಎಂದು ನನ್ನ ನೋಟವನ್ನು ಮತ್ತೊಂದು ಕಡೆ ಸೆಳೆದಳು.

ಅಲ್ಲಿ ಬಹು ದೂರದಲ್ಲಿ, ತುಂಬು ಬೆಳುದಿಂಗಳಲ್ಲಿ, ಆ ಸುಖಮಯ ವಾತಾವರಣದಲ್ಲಿ, ಹೂವಿನ ಸುವಾಸನೆಯ ಸುಂದರ ಸನ್ನಿವೇಶದಲ್ಲಿ ತಾವೇ ತಾವಾಗಿ, ಯಾರ ಪರಿವೆಯೂ ಇಲ್ಲದೆ ನಮ್ಮ ಮನೆಯ ಕಡೆ ಮುಖಮಾಡಿ ಕೊಂಡು ಬರುತ್ತಿದ್ದ ನವದಂಪತಿಗಳ ದೃಶ್ಯ ಕಣ್ಣಿಗೆ ಬಿತ್ತು. ಬೆಳುದಿಂಗಳ ಬೆಳಕು ಅವರ ಮುಖಕ್ಕೆ ನೂತನ ಕಾಂತಿಯನ್ನುಂಟುಮಾಡಿತ್ತು. ಅವರಿಬ್ಬರ ಉಡುಗೆತೊಡುಗೆ ಸಮಯಕ್ಕೆ ಅನುಗುಣವಾಗಿತ್ತು. ಆ ಇಬ್ಬರೂ ನಮ್ಮ ಮನೆಯ ತೋಟದಲ್ಲಿ ನಮ್ಮಿಂದ ನೂರು ಗಜ ದೂರ ನಿಂತು ಇನ್ನೇನು ಹೊರಡಬೇಕೆಂಬ ಕಾರಣದಿಂದ ತುಂಬಿಬಂದ ಆ ವೇ ಶ ದ ಲ್ಲಿ ಪರಸ್ಪರ ಆಲಿಂಗನ ಚುಂಬನಗಳಲ್ಲಿ ಮಗ್ನರಾದರು.

ಅವರು ಜೂಲೀ ರೋಮೇರವರ ಮನೆ ಆಳುಮನುಷ್ಯರು. ಕೇವಲ ಸಣ್ಣ ದರ್ಜೆಯಲ್ಲಿರುವ ಈ ಈರ್ವರಲ್ಲಿ ಹುದುಗಿಕೊಂಡಿರುವ ಪ್ರೇಮದ ಆಳವು, ಅದೂ ಇಂತಹ ಸುಂದರ ರಾತ್ರಿಯಲ್ಲಿ ನಿಸರ್ಗದೇವತೆಯ ಮಡಿಲಲ್ಲಿ ಸುಖವಾಗಿ ಸಮಯ ಕಳೆಯಬೇಕೆಂಬ ಅವರ ಆ ಯೋಜನೆ ಕಲಾತ್ಮಕವಾದುದೇ. ಅವರ ಈ ಸುಂದರ ಕಲ್ಪನೆಗೆ ನಾನು ಆಶ್ಚರ್ಯಹೊಂದಿದೆ. ಮುಂದೇನು ನಡೆಯುವುದೋ ಎಂದು ಆತುರದಿಂದ ನೋಡತೊಡಗಿದೆ.

ಅಗಲಬೇಕೆಂದು ನೆನೆದ ಅವರು, ಮತ್ತೆ ಆ ಬೆಳುದಿಂಗಳಲ್ಲಿ ಹೆಚ್ಚು ಸಮಯ ಕಳೆಯಬೇಕೆಂಬ ಉದ್ದೇಶದಿಂದ, ಕೈ ಕೈ ಸೇರಿಸಿಕೊಂಡು ಮುಂದೆ ಸಾಗಿದರು. ಇಬ್ಬರೂ ಸೇರಿ ಚಂದ್ರಲೋಕವನ್ನು ಸೇರುವರೇನೋ ಎಂಬಂತೆ ಭಾಸವಾಯಿತು. ಕನಸಿನಲ್ಲಿಯ ವ್ಯಕ್ತಿಗಳಂತೆ ಅವರು ಆ ನಿಸರ್ಗದ ಹರವಿನಲ್ಲಿ ನಡೆದು ಹೋದರು. ಪ್ರಕೃತಿದೇವಿಯು ಈ ಪ್ರೇಮೋಪಾಸಕರನ್ನು ತನ್ನ ಮಡಿಲಲ್ಲಿ ಅಡಗಿಸಿಕೊಂಡಳೆಂಬಂತೆ ಭಾಸವಾಯಿತು.

ಇನ್ನು ನಾನು ಅಲ್ಲಿ ಹೆಚ್ಚು ಸಮಯ ಇರುವುದು ಸರಿಯೆನಿಸಲಿಲ್ಲ. ಆ ಮುದುಕಿ ತನ್ಮಯಳಾಗಿದ್ದಳು. ಹೋಗಿಬರುವೆನೆಂದು ಅವಳಿಗೆ ಹೇಳಿದೆ. ಅವಳ ಮೌನವೇ ಸಮ್ಮತಿಯೆಂದು ಭಾವಿಸಿ ನನ್ನ ಊರು ಸೇರಲು ರೈಲು ನಿಲ್ದಾಣಕ್ಕೆ ಧಾವಿಸಿ ಬಂದೆ.

ಅಂದು ನಾ ಕಂಡ ಆ ದೃಶ್ಯವನ್ನು ಎಂದೂ ಮರೆಯಲಾರೆ?

—Julie Romain

# ನರ್ತಕಿಯಾದರೇನು ?

ನಾಟಕದಲ್ಲಿ ಪಾತ್ರ ವಹಿಸುವ ಸ್ತ್ರೀಯರೆಂದರೆ ಜನರಿಗೆ ಎಲ್ಲಿಯೂ ಇಲ್ಲದ ವ್ಯಾಮೋಹ. ಅವರ ತಳುಕು ಬೆಳಕಿನ ರೂಪು ಲಾವಣ್ಯಗಳಿಗೆ ಮಾರು ಹೋಗಿ ಹುಚ್ಚೆದ್ದು ಕುಣಿದಾಡುವವರ ತಂಡವೇ ಹೆಚ್ಚು. ಇಂಥ ಸ್ತ್ರೀಯರ ಜೀವನ ಬಹು ಹೇಯವೂ ನೀತಿಬಾಹಿರವೂ ಆಗಿರುವುದೆಂದು ತಿಳಿದೂ, ಸಮಾಜದಲ್ಲಿ ಪ್ರತಿಷ್ಠಿತರೆನಿಸಿಕೊಂಡವರನೇಕರು ಇಂತಹ ಜನರ ಸಹವಾಸ, ಸಹಾನುಭೂತಿಗಳನ್ನು ಬಯಸುವರು. ಈ ಬಗೆಯ ಕಸದಬುಟ್ಟಿಯಲ್ಲಿ ನೀತಿಯುತ ಜೀವನದಿಂದ ಬಲು ದೂರವಿರಲೇಬೇಕಾದ ಜನಾಂಗದಲ್ಲಿ ಎಲ್ಲಿಯಾದರೂ ಒಂದು ನಿರ್ಮಲ ಜೀವಿ, ಶೀಲವಂತೆ ಕಂಡುಬರುವುದೆಂಬ ಮಾತು ನಿರ್ಧರಿಸಲು ನಾನು ಈ ಕತೆಯನ್ನು ವಿವರಿಸುವೆನು.

೧೮೫೮ ರ ಛಳಿಗಾಲ. ಓರ್ವ ಅನುಪಮ ಸುಂದರಿ ಅಲ್ಲಿಯ ಉತ್ತಮ ನಾಟಕಗೃಹದಲ್ಲಿ ನರ್ತಿಸುವಳೆಂಬ ಸುದ್ದಿ ಹರಡಿತ್ತು. ಎಲ್ಲೆಲ್ಲಿಯೂ ಆ ಸುಂದರಿಯ ಮಾತೇ. ಅವಳೋರ್ವ ಉತ್ತಮ ನರ್ತಕಿಯೆಂದು ತಿಳಿದಿತ್ತು. ಈ ವಿದ್ಯೆಯ ಜತೆಗೆ ಅವಳು ಲಾವಣ್ಯವತಿಯೂ ಆಗಿರುವಳೆಂಬುದು ತಿಳಿದ ಮೇಲೆ ಅನೇಕರು ಅವಳ ಸ್ನೇಹವನ್ನು ದೊರಕಿಸಲು ಆತುರರಾಗಿದ್ದರು. ರಾತ್ರಿ ಕಿಕ್ಕಿರಿದು ತುಂಬಿದ ನಾಟಕ ಗೃಹದಲ್ಲಿ ಮೊದಲನೆಯ ಪ್ರದರ್ಶನ ಮುಗಿದನಂತರ ಅವಳ ಬಗ್ಗೆ ಅನೇಕರು ಮಾತಿಗೆ ಮಿಕ್ಕು ಹೊಗಳತೊಡಗಿದರು. ಅವಳೋರ್ವ ಅಪೂರ್ವ ಕಲಾವಿದೆಯೆಂದೂ ಹಿಂದೆ ಇಂತಹ ಎಳೆವಯಸ್ಸಿನ ಸುಂದರಿಯಲ್ಲಿ ಈ ಬಗೆಯ ಕಲೆಯನ್ನು ಯಾರೂ ಕಂಡಿಲ್ಲವೆಂದೂ ಜನರಾಡಿಕೊಳ್ಳತೊಡಗಿದರು. ಗ್ರೀಕ್ ಮತ್ತು ಲಾಟಿನ್ ಭಾಷೆಯ ಉಪಮಾಗಳೆಲ್ಲವೂ ಅವಳ ಚೆಲುವು ಸೊಬಗುಗಳ ಮುಂದೆ ತೀರ ಅಪ್ರಯೋಜಕವೆಂದು ತೀರ್ಮಾನವಾಯಿತು. ನೃತ್ಯ ಮುಗಿದ ನಂತರ ಅಂದು ಅವಳು ತನ್ನ ಬಿಡದಿಮನೆ ಸೇರುವುದೂ ಕಷ್ಟವಾಯಿತು.

ಮಾರನೆಯ ದಿನ ಅವಳು ಏಳುವ ಹೊತ್ತಿಗೆ ಕಾಣಲು ಬಂದ ಯುವಕರ ತಂಡವು ಅವಳನ್ನು ಆಶ್ಚರಿಗೊಳಿಸಿತು. ಅವಳಿಗೆ ಕಾಣಿಕೆಯಾಗಿ ಕೊಡಲ್ಪಟ್ಟ ವಸ್ತುಗಳ ಪ್ರಮಾಣ ಲೆಕ್ಕಕ್ಕೆ ಮೀರಿತ್ತು. ಅವುಗಳ ಮಾರಾಟದ ಆದಾಯದಿಂದ ಅವಳು ನೃತ್ಯಕಲೆಯನ್ನು ಬದಿಗಿರಿಸಿ ಸುಖವಾಗಿ ಜೀವಿಸ ಬಹುದಾಗಿತ್ತು. ನರ್ತಕಿ ಇವುಗಳನ್ನು ಬಯಸಲಿಲ್ಲ. ಈ ಆಡಂಬರ ಸೋಗಿನ ಜೀವನ ಅವಳಿಗೆ ಬೇಡವಾಗಿತ್ತು. ಒಲ್ಲೆನೆಂದು ಆ ಬಹುಮಾನಗಳನ್ನು ನಿರಾಕರಿಸಬೇಕೆಂದಿರುವಲ್ಲಿ ಅವಳ ಹೆತ್ತ ತಾಯಿ ನಡುವೆ ಬಂದು ತನ್ನ ಕಲೆಗೆ ಪ್ರೋತ್ಸಾಹವನ್ನೀಯುವ ಈ ಕಲಾರಾಧಕರ ನಿಜವಾದ ಮನ್ನಣೆಯನ್ನು ಅಲ್ಲಗಳೆಯುವದು ತರವಲ್ಲವೆಂದು ಹೇಳಿದಳು. ಅಂದಿಗೆ ಅವಳು ಬಲು ಸೋತ ಮನಸ್ಸಿನಿಂದ ಅವುಗಳನ್ನು ಸ್ವೀಕರಿಸಿದಳು. ಅವಳ ಆರಾಧಕರು ತೃಪ್ತಿಗೊಂಡು ಹಿಂತಿರುಗಿದರು.

ಆದರೆ ಈ ಪಿಡುಗು ಇಲ್ಲಿಗೇ ನಿಲ್ಲಲಿಲ್ಲ. ದಿನವೂ ಇಂತಹ ಜನರ ಕಾಟ ಹೆಚ್ಚಿತು. ನೃತ್ಯವಾದ ನಂತರ ಶಾಂತಿಯಿಂದ ಅವಳಿಗೆ ಮಲಗುವುದೇ ಕಠಿಣವಾಯಿತು. ಆದರೂ ತಾಯಿಯ ಮೇಲಿನ ಮಮತೆಯಿಂದ ಎಲ್ಲ ವನ್ನೂ ಸಹಿಸಿಕೊಂಡಳು.

ಒಂದು ದಿನ ಓರ್ವ ಶ್ರೀಮಂತ ಮುದುಕನು ಸಮಯ ಸಾಧಿಸಿ ಈ ನರ್ತ ಕಿಯನ್ನು (ಅವಳ ಹೆಸರು ಹೆನ್ರೀಟಾ) ಸಂಜೆಸಮಯ ಕಂಡನು. ಹೆನ್ರೀಟಾ ಅವನನ್ನು ಸಾಮಾನ್ಯ ರೀತಿಯ ಯುವಕನೆಂದು ತಿಳಿದು ತಾತ್ಸಾರ ಭಾವನೆ ಯಿಂದ ಕಂಡಳು. ಇದು ಹೆಸರು ಗಳಿಸಿದ ನರ್ತಕಿಯ ಸಹಜಗುಣವೆಂದು ಆ ಶ್ರೀಮಂತನು ಭಾವಿಸಿದ. ಅವಳು ಬೇಕೆಂದೇ ಹೀಗೆ ವರ್ತಿಸಿರಬೇಕೆಂದು ನೆನೆದ. ಅವಳು ಬೇಡವೆಂದರೂ ದಿನವೂ ಏನಾದರೂ ಒಂದು ಕಾರಣದಿಂದ ನರ್ತಕಿಯನ್ನು ಕಂಡು ತನ್ನ ಮೆಚ್ಚುಗೆಯನ್ನು ಸೂಚಿಸಿ ಪ್ರೇಮ-ಕಾಮದ ನೋಟವನ್ನು ಬೀರುತ್ತಿದ್ದ. ನರ್ತಕಿಯ ತಾಯಿಯು ಈ ಶ್ರೀಮಂತನಿಗೆ ನೆರವಾಗುತ್ತಿದ್ದಳು. ಮುಂದೆರಡು ದಿನಗಳಲ್ಲಿ ತಾಯಿಯು ಊರಲ್ಲಿಯ ಹೆಸ ರಾದ ಹೋಟಲಿನಲ್ಲಿರುವುದೆಂದು ನಿಶ್ಚಯಿಸಿ ಅಲ್ಲಿಗೆ ನರ್ತಕಿಯ ಬಿಡಾರವನ್ನು ಬದಲಾಯಿಸಿದಳು. ದಿನದಿನಕ್ಕೂ ಹೆನ್ರೀಟಾಳಿಗೆ ಬೆಲೆಬಾಳುವ ಅರಿವೆ

ಮುಂತಾದಗಳು ಒದಗಿಸಲ್ಪಟ್ಟವು. ಇವೆಲ್ಲವನ್ನೂ ಕಂಡು ಅವಳು ತಾಯಿಯನ್ನುದ್ದೇಶಿಸಿ "ಅಮ್ಮಾ, ನಿನಗೇನಾದರೂ ಲಾಟರಿಯಲ್ಲಿ ಹಣ ದೊರಿತಿದೆಯೆ ?" ಎಂದು ಒಂದು ದಿನ ಆ ಶ್ರೀಮಂತನೆದುರಿನಲ್ಲೇ ಕೇಳಿದಳು.

"ಅಹುದು" ಎಂದು ತಾಯಿ ಸುಳ್ಳು ಹೇಳಿದಳು.

ಆದರೆ ಆ ನರ್ತಕಿಯು ಇದಕ್ಕೆ ಪೂರ್ವದಲ್ಲಿಯೇ ಓರ್ವ ಯುವಕನನ್ನು ಪ್ರೇಮಿಸಿದ್ದಳು. ಅವನು ಬೆಲೆಬಾಳುವ ಪಾರಿತೋಷಕಗಳನ್ನು ಕಳಿಸಿರಲಿಲ್ಲ. ಅತ್ಯುತ್ತಮ ಅರಿವೆಗಳನ್ನೂ ದಾನ ಮಾಡಿರಲಿಲ್ಲ. ಆದರೆ ತನ್ನ ರೂಪು, ಚೆಲುವು, ಯೌವನಗಳಿಂದ ಅವಳ ಮನಸ್ಸನ್ನು ಆಕರ್ಷಿಸಿದ್ದನು. ದಿನವೂ ಅವಳು ನಾಟಕಗೃಹಕ್ಕೆ ಬರುವಾಗ ಮತ್ತೆ ನೃತ್ಯ ಮುಗಿಸಿ ಹೋಗುವಾಗ ಬಾಗಿಲ ಬಳಿ ಮೌನದಿಂದ ನಿಂತು ದಿಟ್ಟಿಸಿ ನೋಡುವುದನ್ನು ಮಾತ್ರ ಅವಳು ಕಂಡಿದ್ದಳು. ಅನಂತರ ಅವನು ಅವಳನ್ನು ಹಿಂಬಾಲಿಸುತ್ತಿದ್ದ. ಒಂದು ದಿನ ಪಕ್ಕದ ಊರಲ್ಲಿ ಮಿತ್ರಳ ಮನೆಗೆ ಹೋದ ಸಮಯದಲ್ಲಿಯೂ ಅವಳ ಹಿಂದೆಯೇ ಬಂದಿದ್ದುದು, ತನ್ನ ಪ್ರೇಮವನ್ನು ಸ್ವಲ್ಪೇ ಮಾತಿನಲ್ಲಿ ವ್ಯಕ್ತ ಮಾಡಿದುದು ಅವಳಿಗೆ ತಿಳಿದಿತ್ತು. ಅವನು ಪೂರ್ಣ ಹೃದಯದಿಂದ, ತುಂಬು ಮನಸ್ಸಿನಿಂದ, ಆಡಂಬರವಿಲ್ಲದ ನೋಟದಿಂದ, ಕಾಮದ ಪ್ರೇರಣೆ ಇರದ ನೈಜ ಪ್ರೇಮದಿಂದ ತನ್ನನ್ನು ಆಶಿಸುವನೆಂದು ಅವಳು ತಿಳಿದಿದ್ದಳು.

"ನಿನ್ನನ್ನು ನಿಜವಾಗಿಯೂ ಪ್ರೀತಿಸುತ್ತೇನೆ. ನಿನ್ನನ್ನು ಕಂಡು ನಾನು ಮರುಳಾಗಿದ್ದೇನೆ. ನಿನ್ನ ಲಾವಣ್ಯಕ್ಕೆ ನಾನು ಸೋತಿರುವೆನು. ನಿನ್ನ ರೂಪು ನನಗೆ ಅತ್ಯಾನಂದವನ್ನುಂಟುಮಾಡಿದೆ. ಆದರೆ ನನ್ನ ಹೃದಯ ವೇದನೆ ಮಾತ್ರ ಹೆಚ್ಚಿದೆ. ನಿನ್ನ ನೃತ್ಯಕಲೆ ನನ್ನನ್ನು ಮರುಳುಗೊಳಿಸಿದೆ". ಎಂದು ಹೇಳಿದ ಅವನ ಮಾತುಗಳಿಗೆ ನರ್ತಕಿ "ಹಾಗೆಂದರೇನರ್ಥ ?" ಎಂದು ಕೇಳಿದಳು.

"ನೀನು ದಿನವೂ ನಿನ್ನಲ್ಲಿಗೆ ಬರುತ್ತಿರುವ ಆ ಶ್ರೀಮಂತನನ್ನು ಪ್ರೀತಿಸುವುದಿಲ್ಲವೇ ? ಅವನ ವಶದಲ್ಲಿ ಈಗ ನೀನಿಲ್ಲವೇನು ?" ಎಂದ ಮಾತಿಗೆ ಹೆನ್ರೀಟಾ ತಲೆಯಾಡಿಸುತ್ತ "ನಾನಾರ ವಶದಲ್ಲಿಯೂ ಇಲ್ಲ. ಇಲ್ಲಿಯು

ವರೆಗೆ ನಾನು ನಿಮ್ಮನ್ನಲ್ಲದೆ ಯಾರನ್ನೂ ಮನಸಾರೆ ಮೆಚ್ಚಿಲ್ಲ. ಬೇಕಾದರೆ ನೀವು ದಿನವೂ ನನ್ನ ಕೋಣೆಗೆ ಬರಬಹುದು. ನನ್ನ ವರ್ತನೆಯ ಬಗ್ಗೆ ಪರೀಕ್ಷೆ ಮಾಡಬಹುದು. ನಾನು ಕಲೋಪಾಸಕಿ. ಹೊರಗಿನವರು ನಮಗೆ ಹೃದಯವಿಲ್ಲವೆಂದೂ, ಮಾರಾಟಕ್ಕಿರುವ ವಿಕ್ರಯ ವಸ್ತುಗಳಂತೆ ನಮ್ಮ ಪ್ರೇಮ ವಿಕ್ರಯಕ್ಕೆ ಸಿಗುವದೆಂದು ಭಾವಿಸುವರು. ಆದರೆ ನನ್ನ ಪ್ರೇಮ ಮರ್ಯಾದೆಯಿಂದ ಬಾಳುವ ಯುವಕನಿಗೆ ಮೀಸಲು. ಸಂಪತ್ತು, ವೈಭವಗಳು ನನ್ನನ್ನು ಮರುಳುಗೊಳಿಸುವುದಿಲ್ಲ. ನನ್ನ ಪ್ರೇಮವನ್ನು ಹಣದಿಂದ ಕೊಳ್ಳಲು ಸಾಧ್ಯವಿಲ್ಲ. ಹೃದಯ ತೆರೆದು ನನ್ನನ್ನು ಬಯಸುವ ಸದ್ಗುಣಿಗೆ ನನ್ನ ಜೀವನ ಮೀಸಲು" ಎಂದು ನುಡಿದ ಮಾತುಗಳಿಗೆ ಆ ಯುವಕ ವಿಸ್ಮಿತನಾದ.

ಆದರೆ ನರ್ತಕಿಯ ಬಿಚ್ಚುಮಾತು ಅವನಿಗೆ ಕೊಂಚ ಧೈರ್ಯವನ್ನು ತಂದೊಡ್ಡಿತು. ಕೊಂಚ ಆವೇಶದಿಂದ "ಆದರೆ......ಆದರೆ........ನಿಮ್ಮ ಈ ಬೆಲೆಬಾಳುವ ವೇಷಭೂಷಣಗಳೂ, ಆ ದಿವ್ಯ ಹೋಟೆಲಿನಲ್ಲಿ ವಾಸ...... ಇವೆಲ್ಲವೂ ನಿಮ್ಮ ಸಂಬಳದಿಂದಲೇ...........?" ಎಂದು ಅನುಮಾನದಿಂದ ಕೇಳಿದ.

"ನನ್ನ ತಾಯಿಗೆ ಲಾಟರಿಯಿಂದ ಹಣ ಬಂದಿದೆ" ಎಂದು ಹೇಳಿ ಆ ಮಾತನ್ನಲ್ಲಿಗೆ ಮುಗಿಸಿದಳು.

ಅಂದು ಸಂಜೆ ಆ ಯುವಕನು ಅವಳ ಮನೆಗೆ ಹೋದ. ಮುಂದೆ ದಿನವೂ ಸಂಜೆ ಹೋಗಿಬರುತ್ತಿದ್ದ. ಇವನೀರೀತಿಯಾಗಿ ಬರುವುದು ತಾಯಿಗೆ ಬೇಡವಾಗಿತ್ತು. ಕೆಲವು ದಿನಗಳ ನಂತರ ಒಂದು ದಿನ ತಾಯಿಯ ಎದುರಿನಲ್ಲಿ ಆ ಶ್ರೀಮಂತ ಈ ಯುವಕನ ಬಗ್ಗೆ ನರ್ತಕಿಯನ್ನು ವಿಚಾರಿಸಿದ. ನರ್ತಕಿಯು ಸಂಕೋಚವಿಲ್ಲದೆ "ಇದರಲ್ಲೇನು ಆಶ್ಚರ್ಯವಿದೆ? ನಾನು ಅವನನ್ನು ಪ್ರೀತಿಸುವಂತೆ ಅವನೂ ನನ್ನನ್ನು ಪ್ರೇಮಿಸುತ್ತಿರುವನು. ಮುಂದಿನದನ್ನು ನೀವೇ ಊಹಿಸಿ" ಎಂದು ಉತ್ತರವಿತ್ತಳು. ಶ್ರೀಮಂತನಿಗೆ ಬೇಸರವೆನಿಸಿತು. ಸಿಡುಕಿನಿಂದ ಮನೆ ಸೇರಿದ. ಮಾರನೆಯ ದಿನದಿಂದ ಇವರಿಗೆ ಧನದ ಸಹಾಯ ನಿಂತುಹೋಯಿತು.

ತಾಯಿಯು ದುಃಖಿಸತೊಡಗಿದಂತೆಲ್ಲ ನರ್ತಕಿಯು ನಗತೊಡಗಿದಳು. "ಅಮ್ಮಾ ! ಆ ಮುದುಕ ಶ್ರೀಮಂತನ ಹತ್ತಿರ ಹಣವಿರಬಹುದು. ನಿಮ್ಮಿಬ್ಬರ ನಡುವೆ ನನ್ನ ಬಗ್ಗೆ ನಡೆದ ಮಾತುಕತೆಗಳಿಗೆ ನಾನು ಹೇಗೆ ಬಾಧ್ಯಳು ? ನೀನು ಅವರೊಂದಿಗೆ ಮಾತು-ಕತೆಗಳನ್ನಾಡಿದಾಗ ನನ್ನನ್ನು ವಿಚಾರಿಸಿದಿಯಾ ? ನಿನಗೆ ಲಾಟರಿ ಬಂದಿದೆಯೆಂದು ನೆನೆದಿದ್ದೆ. ನಿಜವಾದ ವಿಷಯವನ್ನು ನನಗೇಕೆ ತಿಳಿಸಲಿಲ್ಲ ? ನನಗೆ ಆ ಶ್ರೀಮಂತಿಕೆಯ ಜೀವನವೆಂದರೆ ಹೇಸಿಕೆ. ನಾವು ಸಾಮಾನ್ಯರಂತೆ ಜೀವಿಸಬೇಕು. ಅಂತಹ ಜೀವನವೇ ನನಗೆ ಸುಖವೆನಿಸುತ್ತಿದೆ ".

ತಾಯಿ ಮರುಕದಿಂದ ಸುಮ್ಮನಿದ್ದಳು.

ನರ್ತಕಿಯ ಮಾತುಗಳಿಗೆ ಆ ಯುವಕನು ಚಕಿತನಾದ. "ಹೆನ್ರೀಟಾ ! ನೀನು ನನ್ನ ಪ್ರೇಮಕ್ಕಾಗಿ ಇದೆಲ್ಲವನ್ನೂ ತೊರೆಯುವಿಯಾ ? ಕಷ್ಟ ಜೀವನವನ್ನು ಸಹಿಸುವೆಯಾ ?" ಎಂದು ಮಮತೆಯಿಂದ ಕೇಳಿದ. ಉಕ್ಕಿಬರುವ ಮಮತೆಯ ನೋಟದಿಂದ ಅವನನ್ನು ನೋಡಿ "ಅದೇಕೆ ? ನಿಜವಾಗಿಯೂ ನನ್ನ ಮನಸ್ಸಿಗೆ ಬಂದವನು ಶ್ರೀಮಂತನಾದರೇನು ಬಡವನಾದರೇನು. ನನಗೆ ಅವನೇ ಸುಖ ಕೊಡುವನೆಂದು ನಂಬಿದ್ದೇನೆ. ಮಾನಸಿಕ ಸುಖ ಕೊಡದ ಹಣವಂತನಿಂದೇನು ಪ್ರಯೋಜನ ?" ಎಂದು ಹೇಳಿದ ಮಾತುಗಳು ಅವನನ್ನು ಹೆಚ್ಚು ಬೆರಗುಗೊಳಿಸಿದವು. ಅವಳ ನಿರ್ಮಲ ಜೀವನದ ಸಾದೃಶ್ಯವನ್ನಿಲ್ಲಿ ಕಂಡು ಆ ಯುವಕನು "ಪ್ರಿಯೆ, ನಿನ್ನಲ್ಲಿ ಇಲ್ಲಿಯವರೆಗೆ ಹೇಳದೆ ಉಳಿಸಿದ ಒಂದು ವಿಷಯವನ್ನು ತಿಳಿಸುವೆನು. ನಾನೂ ಶ್ರೀಮಂತನೇ. ಆದರೆ ನನ್ನ ಶ್ರೀಮಂತ ತಂದೆಯು ಇನ್ನೂ ನನಗೆ ನಮ್ಮ ಮನೆಯ ಆಸ್ತಿಯನ್ನು ಸ್ವಾಧೀನಪಡಿಸಿಲ್ಲ. ಮುಂದೆ ಎಂದಾದರೂ ಬಂದೇ ಬರುವುದು. ನೀನು ಸುಖದಿಂದಿರು. ನಿನಗೆ ಯಾವ ಬಗೆಯ ದುಃಖವನ್ನುಂಟುಮಾಡಲಾರೆ. ನಾನು ಶ್ರೀಮಂತ....ರ ಮಗ " ಎಂದು ಹೇಳಿದನು.

ತಾಯಿಗೂ ಸಂತೋಷವಾಯಿತು. ಇವರ ಪ್ರೇಮಮಯ ಜೀವನ ಹೀಗಿಯೇ ಮುಂದುವರಿಯಿತು. ನಾಟಕದಲ್ಲಿ ನೃತ್ಯದ ಕಾರ್ಯಕ್ರಮವೂ

ನಡೆಯುತ್ತಲಿತ್ತು, ಅವರ ಶ್ರೀಮಂತಿಕೆಯ ಜೀವನಕ್ಕೆ ಇವರಿಗೆ ತಿಳಿಯ ದಂತೆ ಆ ಯುವಕನು ಸಾಲಮಾಡತೊಡಗಿದ. ಒಂದು ವರುಷದಲ್ಲಿ ಇವನ ಸಾಲ ಹೆಚ್ಚುತ್ತಿರಲು, ಈ ಬಗೆಯಾಗಿ ಹಣವೇಕೆ ವೆಚ್ಚವಾಗುತ್ತಿರುವುದೆಂಬು ದರ ನಿಜಕಾರಣವನ್ನು ಅವನ ಶ್ರೀಮಂತ ತಂದೆಯು ತಿಳಿದು ಕುಪಿತನಾದ. ನೀಚ ವಂಶಜಳಾದ ಆ ನರ್ತಕಿಯ ಸಹವಾಸ ತೊರೆಯದಿದ್ದರೆ ಆಸ್ತಿಯಲ್ಲಿ ಒಂದು ಬಿಡಿಕಾಸೂ ಕೊಡುವುದಿಲ್ಲೆಂದು ಬೆದರಿಸಿದ. ಸರಿಯಾದ ನಿರ್ಣಯ ವನ್ನು ಬೇಗ ತಿಳಿಸಬೇಕೆಂದು ಒತ್ತಾಯಪಡಿಸಿದ.

ನಿರ್ಣಯದ ನಿಯಮಿತದ ದಿನ ಬರಲು ಅಂದು ಸಂಜೆ ಆ ಯುವಕನು ತನ್ನ ನಿಜಪರಿಸ್ಥಿತಿಯನ್ನು ವಿವರಿಸಿ ಹೆನ್ರೀಟಾಳ ಸಲಹೆಯನ್ನು ಕೇಳಿದ. ಅವನ ಮಾತುಗಳಲ್ಲಿಯ ಸರಳತೆ, ಅವನ ಹೃದಯದಿಂದ ಚಿಮ್ಮಿಬರುವ ಆವೇಗ, ಅವನ ಅಂತಃಕರುಣ ಇವುಗಳೆಲ್ಲವೂ ಹೆನ್ರೀಟಾಳನ್ನು ಬೆರಗುಗೊಳಿ ಸಿದವು.

“ಪ್ರಿಯೆ, ನಾವಿಬ್ಬರೂ ಆಗಲುವ ಸಮಯ ಬಂದಿದೆ. ಈ ಅಗಲಿಕೆ ಮೊದಲೇ ನಿರ್ಧಾರಿತ. ಆದರೆ ನಾನಾಗಿ ದೂರ ಸರಿಯಲು ಒಪ್ಪುತ್ತಿಲ್ಲ. ನನ್ನಿಂದ ನಿನಗೆ ಬಡತನ ಬರಬಾರದೆಂದೂ, ನಿನ್ನ ಕಲೆಗೆ ಕುಂದು ಬರಬಾರ ದೆಂದೂ ದೂರಾಗಲು ಬೇಡಾದ ಮನಸ್ಸಿನಿಂದ ನಿಶ್ಚಯಿಸಿರುವೆ. ಆದರೆ ನಾನು ಮಾನವಂತನಂತೆ ಬಾಳಲು ನಿಶ್ಚಯಿಸಿದ್ದೇನೆ. ನನ್ನ ತಂದೆಯ ಹಂ ಗಿನ ಹಣ ನನಗೆ ಬೇಡ. ದುಡಿದು ಹಣಗಳಿಸಿ ನಾನೇ ಶ್ರೀಮಂತನಾಗಲು ಯತ್ನಿಸುತ್ತೇನೆ. ಆದರೆ ಅಲ್ಲಿಯವರೆಗೆ ನಿನ್ನನ್ನು ದುಃಖದಲ್ಲಿರೆಂದು ಹೇಳುವ ಧೈರ್ಯ ನನಗಿಲ್ಲ. ನೀನು ಸ್ವತಂತ್ರಳು. ಆದರೆ ನಿನ್ನನ್ನು ತೊರೆಯಲು ನನಗೆ ಬಲು ದುಃಖವೆನಿಸುತ್ತದೆ. ಇದು ವಿಧಿನಿಯಮ. ಮಾನವನಾದ ನಾನು ಆ ನಿಯಮಕ್ಕೆ ಬಾಗಲೇಬೇಕಾಗಿದೆ. ನಿನಗೆ ತೋರಿದ ದಾರಿ ನೀನು ಅನುಸರಿಸು.” ಎಂದು ಆವೇಶದಿಂದ ಹೇಳಿದ ಮಾತುಗಳನ್ನು ಕೇಳಿ ಹೆನ್ರೀಟಾ ಅವನನ್ನು ಪ್ರೇಮದಿಂದ ಕಂಡು ಮರುಕ್ಷಣದಲ್ಲಿಯೇ ನಿಶ್ಚಿತಮುಖಮುದ್ರೆ ಯಿಂದ “ನಾನು ನಿಮ್ಮನ್ನು ತೊರೆಯಬೇಕೇ? ನೀವಿದ್ದಲ್ಲಿಯೇ ನಾನಿರುವೆನು. ನಿಮ್ಮ ಕಷ್ಟ ನನ್ನದು. ನಿಮ್ಮಿಂದ ಸುಖವನ್ನನುಭವಿಸಿರುವೆನು. ದುಃಖ

ಬಂದರೆ ನಾನು ಜರಿಯಲೆ? ಇಲ್ಲ. ನಿಮ್ಮನ್ನು ನಾನು ಬಿಟ್ಟುಕೊಡಲಾರೆ. ನಿಮ್ಮ ಸಹವಾಸದಲ್ಲಿ ಏನು ಬಂದರೂ ಅದನ್ನು ಸಂತೋಷದಿಂದ ಅನುಭವಿಸು ವೆನು." ಎಂದು ಹೇಳಿದ ಅವಳ ನಿಶ್ಚಯವಾಕ್ಯಗಳು ಆ ಯುವಕನಿಗೆ ಧೈರ್ಯ ತಂದು ಕೊಟ್ಟಿತು.

"ನಿನ್ನ ತ್ಯಾಗಕ್ಕೆ ನಾನು ಬಹಳ ಋಣಿ ಹೆನ್ರೀಟಾ"

"ನಿಮ್ಮ ನಿರ್ಮಲ ಅಂತಃಕರಣವೇ ಇದಕ್ಕೆ ಕಾರಣ. ತ್ಯಾಗ ನನ್ನ ದಲ್ಲ, ನಿಮ್ಮದು."

"ನಮ್ಮಿಬ್ಬರ ಬಾಳು ಇಂದಿನಿಂದ ಒಂದಾಯಿತು. ಇದನ್ನು ಬೇರೆ ಯಾಗಿಸಲು ಯಾರಿಂದಲೂ ಸಾಧ್ಯವಿಲ್ಲ."

"ನನ್ನ ನಿರ್ಧಾರವೂ ಇದೇ."

ಮುಂದೆ ಆ ಶ್ರೀಮಂತತಂದೆ ತನ್ನ ಮಗನನ್ನು ಮನೆಯಲ್ಲಿರಗೊಡಲಿಲ್ಲ. ಯಾವ ಬಗೆಯ ನೆರವನ್ನೂ ನೀಡಲಿಲ್ಲ. ಜೀವಿಸಲು ಏನನ್ನೂ ಕೊಡಲಿಲ್ಲ. ಇವನೊಂದಿಗೆ ನೆಮ್ಮದಿಯಿಂದ ಇರಲು ಆ ನರ್ತಕಿ ತಾನು ಹಿಂದೆ ಗಳಿಸಿದ ಆಭರಣಗಳೆಲ್ಲವನ್ನೂ ಮಾರಿದಳು. ಅವನೂ ಸಾಮಾನ್ಯ ಗುಮಾಸ್ತನಾಗಿ ಕೆಲಸಕ್ಕೆ ನಿಂತು ದುಡಿಯತೊಡಗಿದ. ಈ ದಂಪತಿಗಳ ನಿರ್ಮಲ ಜೀವನ ಕ್ರಮ, ನಿಷ್ಕಳಂಕ ವರ್ತನೆ ಆ ನಗರವನ್ನೇ ಬೆರಗುಗೊಳಿಸಿತು. ಇವರಿಬ್ಬ ರನ್ನು ಒಂದಾಗಿಸಿದ ನಿಶ್ಚಲ ಪ್ರೇಮದ ಬಿಗುವನ್ನು ಆ ಶ್ರೀಮಂತ ತಂದೆಯೂ ಕೊಂಚ-ಕೊಂಚವಾಗಿ ತಿಳಿದು, ತನ್ನ ಮೂರ್ಖವರ್ತನೆಗೆ ನಾಚಿದ. ಜೀವ ನದ ನಿರ್ಮಲತೆ ನಡತೆಯಲ್ಲಿದೆ, ಶ್ರೀಮಂತಿಕೆಯಲ್ಲಿಲ್ಲವೆಂಬುದನ್ನರಿತು ತನ್ನ ಸೋಲನ್ನೊಪ್ಪಿಕೊಂಡ. ತಂದೆ, ಮಗನೊಂದಿಗೆ ರಾಜಿಯಾಗಿ, ತನ್ನ ಜೀವನ ದಲ್ಲಿ ಪಾತಕಲಿಸಿದ ಹೆನ್ರೀಟಾಳನ್ನು ತನ್ನ ಸೊಸೆಯನ್ನಾಗಿ ಸ್ವೀಕರಿಸಿದ. ಆ ಶ್ರೀಮಂತನು ದೊಡ್ಡ ವಂಶಜನು. ಆ ಮನೆಯ ಹಿಂದಿನ ಯಜಮಾ ನಿಯು ಧರಿಸುತ್ತಲಿದ್ದ ಬೆಲೆಯುಳ್ಳ ಆಭರಣಗಳನ್ನು ಇಂದು ಆ ನರ್ತಕಿಯು ಧರಿಸುತ್ತಿರುವಳು. ನಾಟಕ ಗೃಹದ ನರ್ತಕಿಗೂ ಹೃದಯವಿದೆ. ಅವಳ ಪ್ರೇಮವೂ ನಿರ್ಮಲವಾಗಿ ಉಳಿಯಬಲ್ಲುದೆಂಬುದಕ್ಕೆ ಬೇರೆ ನಿದರ್ಶನವೇಕೆ?

—Virtue in the Ballet

# ನಾನು ಹುಚ್ಚನೇ ?

ನನಗೆ ಹುಚ್ಚು ಹಿಡಿದಿದೆಯೆ ? ಇಲ್ಲವೆ ಅಸೂಯೆಯೇ ? ನನ್ನ ನಿಜವಾದ ಪರಿಸ್ಥಿತಿ ನನಗೇ ತಿಳಿಯದು. ನಾನೊಂದು ಮಹಾಪರಾಧದ ಕೆಲಸವನ್ನು ಮಾಡಿದ್ದೇನೆ. ಆದರೆ ಈ ಅಪರಾಧಕ್ಕೆ ಕಾರಣಗಳಿಲ್ಲದಿಲ್ಲ. ನನ್ನ ಕತೆಯನ್ನು ಕೇಳಿ ನಂತರ ತಪ್ಪು ಯಾರದೆಂಬುದಕ್ಕೆ ನೀವೇ ನಿರ್ಧಾರಕ್ಕೆ ಬನ್ನಿ. ಈ ಕೊಲೆಗೆ ಕಾರಣವು, ನನ್ನ ವಿವಾಹಿತ ಹೆಂಡತಿ ತೋರಿದ ಅವಿಶ್ವಾಸದ ವರ್ತನೆಯೇ, ಇಲ್ಲವೆ ನನ್ನ ಉನ್ಮಾದವೇ ಎಂಬುದನ್ನು ನೀವೇ ನಿರ್ಣಯಿಸಿರಿ.

ನಾನು ಆ ಹೆಂಡತಿಯನ್ನು ಹೆಚ್ಚಾಗಿ ಪ್ರೀತಿಸಿದೆನು. ಇದು ನಿಜ. ಅವಳು ನನ್ನನ್ನು ಪೂರ್ಣ ವಶಮಾಡಿಕೊಂಡಿದ್ದಳು. ಅವಳ ಚೆಲುವಾದ ಕಣ್ಣುಗಳ ಮೋಹದ ನೋಟ ನನ್ನನ್ನು ಪರವಶನನ್ನಾಗಿ ಮಾಡುತ್ತಿತ್ತು. ಅವಳ ದೇವತಾ ಸದೃಶವಾದ ಚೆಲುವಿಗೆ ನಾನು ಮರುಳಾಗಿದ್ದೆ. ಆದರೆ ಅವಳಲ್ಲಿಯ ಇತರ ಅಮಾನುಷ ಗುಣಗಳು ನಾನು ಅವಳನ್ನು ದ್ವೇಷಿಸುವಂತೆ ಮಾಡಿದವು. ಅವಳೋರ್ವ ಸ್ತ್ರೀ ರಾಕ್ಷಸಿಯಂತೆ ನನಗೆ ಕಂಡುಬಂದಳು. ಅವಳ ದೇಹದಲ್ಲಿ ಪಾಪವೇ ಮನೆಮಾಡಿಕೊಂಡಿತ್ತೆಂದರೆ ತಪ್ಪಾಗಲಾರದು.

ನಮ್ಮ ಮದುವೆಯ ಮೊದಲಿನ ದಿನಗಳು ಬಲು ಆನಂದದಾಯಕವಾಗಿದ್ದವು. ಅವಳ ಕಣ್ಣಿನ ಬಣ್ಣ, ಚೆಲುವು, ಒಂದೇ ದಿನದಲ್ಲಿ ಅನೇಕ ಬಗೆಯ ಬದಲಾವಣೆಯನ್ನು ತಾಳುತ್ತಿದ್ದವು. ಅವಳ ಕಾಮುಕ ಸ್ವಭಾವ ನನಗೆ ಹೇಸಿಕೆಯೆನಿಸುತ್ತಿತ್ತು. ಅವಳ ನಾಲಿಗೆ ಸರ್ಪದ ನಾಲಿಗೆಯಂತೆ ಇಬ್ಭಾಗವಾಗಿದ್ದು ಭಯದಾಯಕವಾಗಿತ್ತು. ಅವಳ ನೋಟದ ಆತುರವು ನನ್ನನ್ನು ಪ್ರೇಮಪಾಶದಲ್ಲಿ ಬಿಗಿಯುವುದಕ್ಕಿಂತಲೂ, ಅವಳನ್ನು ಕೊಂದುಬಿಡಲೇ ಎಂಬ ಭಾವನೆಯನ್ನು ನನ್ನಲ್ಲಿ ಉಂಟುಮಾಡುತ್ತಿತ್ತು.

ನನ್ನ ಕೋಣೆಯ ಹತ್ತಿರ ಅವಳು ನಡೆದಂತೆಲ್ಲ ನನ್ನೆದೆ ಝಲ್ಲೆನ್ನುತ್ತಿತ್ತು. ಅವಳು ಮಲಗುವ ಮುನ್ನ ಧರಿಸುತ್ತಿದ್ದ ಆ ಬಿಳಿ ಉಡುಪು ನನ್ನನ್ನು

ಉದ್ರೇಕಗೊಳಿಸುತ್ತಿತ್ತು. ಕೂಡಲೇ ನಾನು ನಿಶ್ಯಕ್ತನಾಗುತ್ತಿದ್ದೆ. ನನ್ನಲ್ಲಿ ಹೇಡಿತನವು ಮೂರ್ತಿಮತ್ತಾಗಿ ನಿಲ್ಲುತ್ತಿತ್ತು. ಈ ಅವಸ್ಥೆಗೆ ನನಗೆ ನಾಚಿಕೆಯಾಗುತ್ತಿತ್ತು. ಹೀಗೆ ನನ್ನನ್ನು ಗುಲಾಮನನ್ನಾಗಿ ಮಾಡಿದ ಅವಳನ್ನು ದಿನವೂ ಮುಂಜಾನೆ ಕಾಣುವಾಗ ಅವಳನ್ನು ಕೊಂದುಬಿಡಬೇಕೆಂಬ ರೋಷ ಉಂಟಾಗುತ್ತಿತ್ತು. ಆದರೆ ಅವಳು ನನ್ನ ಹತ್ತಿರ ಬಂದಂತೆಲ್ಲ ನನ್ನ ಮನೋದಾರ್ಢ್ಯ ಸಡಿಲವಾಗಿ, ಅವಳ ಆಳಾಗುತ್ತಿದ್ದೆ.

ಅಂದು ಅವಳ ಕಣ್ಣಿನ ಆ ನೋಟದಲ್ಲಿ ಬೇಸರದ ಛಾಯೆಯನ್ನು ಕಂಡೆ. ನನ್ನಲ್ಲಿ ಅವಳಿಗೆ ಅಸಹ್ಯ ಉಂಟಾಗಿರಬೇಕೆಂಬ ಭಾವನೆ ತಲೆದೋರಿತು. ಆವೇಶದಿಂದ ನಾನು ಅವಳ ಆಲಿಂಗನವನ್ನೂ, ಮುದ್ದನ್ನೂ ಬಯಸಿದಾಗ, ಅವಳು ನನ್ನನ್ನು ತಳ್ಳಿ 'ದೂರಸರಿಯಿರಿ, ಇದೇನು ಪಶುವಿನಂತೆ?' ಎಂದು ಹೇಳುವ ಅವಳ ಮಾತು ನನ್ನಲ್ಲಿ ಆಗಲೆ ಮನೆಮಾಡಿಕೊಂಡಿದ್ದ ಅನುಮಾನವನ್ನು ಹೆಚ್ಚಿಸಿತು. ನನಗೆ ಹುಚ್ಚು ಹಿಡಿದಿದೆಯೆಂದು ಭಾವಿಸಬೇಡಿ. ನಾನು ಅವಳ ಹಾವಭಾವಗಳನ್ನು, ಅವಳ ಕಾಮುಕ ಚರ್ಯೆಗಳನ್ನೂ ಪರೀಕ್ಷಿಸಿದ್ದೇನೆ. ಅವಳು ಆಗಲೇ ಮತ್ತೊಬ್ಬನನ್ನು ಪ್ರೀತಿಸಿರುವಳೆಂಬ ಅನುಮಾನ ನನ್ನನ್ನು ವೇದಿಸತೊಡಗಿತು.

'ಗಂಡಸರೆಂದರೆ ನನಗೆ ಬಲು ಬೇಸರ' ಮುಂತಾದ ಅವಳ ಚುಚ್ಚು ಮಾತುಗಳು ನನಗೆ ಬಲು ನೋವನ್ನುಂಟುಮಾಡುತ್ತಿದ್ದವು.

ಅಂದಿನಿಂದ ನನಗೆ ಅವಳ ಮೇಲೆ ಎಲ್ಲಿಯೂ ಇಲ್ಲದ ಜಿಗುಪ್ಸೆ ಉಂಟಾಯಿತು. ಅವಳು ವರ್ತಿಸಿದ ರೀತಿಯಲ್ಲಿ ಜನರನ್ನು ಬಲು ಹೇಯವಾಗಿ ಕಾಣುವುದು ನನಗೆ ಸರಿಯೆನಿಸಲಿಲ್ಲ. ಅವಳು ನನಗೆ ತಿಳಿಯದಂತೆ ಮತ್ತಾರನ್ನೋ ಪ್ರೀತಿಸುತ್ತಿದ್ದು, ನನ್ನನ್ನು ಮೋಸಮಾಡಿರುವಳೆಂಬ ಭಾವನೆ ನನ್ನ ಮನಸ್ಸಿನಲ್ಲಿ ಚೆನ್ನಾಗಿ ಬೇರೂರಿ ನನ್ನನ್ನು ನಿರುತ್ಸಾಹಗೊಳಿಸಿತು. ಅವಳು ಹಾಸಿಗೆಯಲ್ಲಿ ಮಲಗಿರುವಾಗ ಕುತ್ತಿಗೆ ಹಿಸುಕುವ ಬೆದರಿಕೆ ತೋರಿಸಿ ಅವಳ ಜಾರತನದ ರಹಸ್ಯವನ್ನು ಅವಳ ಬಾಯಿಯಿಂಲೇ ಹೊರಗೆಡಹುವುದುಚಿತವೆಂದು ಯೋಚಿಸಿದೆ.

ಈ ನನ್ನ ಯೋಚನೆ ಹುಚ್ಚು ಕಲ್ಪನೆಯೇ ?

ಮತ್ತೊಂದು ರಾತ್ರಿ ಅವಳು ಬಲು ಉತ್ಸಾಹಿಯಂತೆ ಕಂಡುಬಂದಳು ಅಂದು ಆವಳಲ್ಲಿ ಹೊಸ ಹುರುಪು, ಕಾಮುಕ ಭಾವನೆ ತಲೆದೋರಿರಬೇಕೆಂದು ಊಹಿಸಿದೆ. ಅವಳ ಉದ್ರೇಕಾವಸ್ಥೆಯೇ ನನಗೆ ಅರ್ಥವಾಗಲಿಲ್ಲ. ಪ್ರೇಮ ದಿಂದ ಆವಳು ತನ್ನನ್ನು ತಾನೇ ಮೈಮರೆತು ವರ್ತಿಸಿದ ಅವಳ ಅಂದಿನ ರೀತಿ ನೀತಿಗಳು ನನಗೆ ಹೊಸತೆನಿಸಿದವು. ಆವಳಲ್ಲಿ ನನಗೆ ಅನುಮಾನವುಂಟಾಗಿದೆ ಯೆಂಬುದನ್ನು ನಾನು ಹೊರಗೆ ತೋರಗೊಡಲಿಲ್ಲ. ಅವಳ ನಡೆ-ನುಡಿ ಗಳನ್ನು ಅವಳಿಗೆ ತಿಳಿಯದಂತೆ ನಿರೀಕ್ಷಿಸಿ ಪರೀಕ್ಷಿಸುತ್ತ ಬಂದೆ. ಒಂದು ವರುಷ ಪರ್ಯಂತ ಈ ಪರೀಕ್ಷೆ ನಡೆಯಿತು. ಆವಳಿಂದ ನಾನು ದೂರವೇ ಇರುತ್ತಿದ್ದೆ. ಅವಳು ನನ್ನನ್ನು ಪ್ರೀತಿಸಬೇಕೆಂಬ ಕಾತರತೆಯನ್ನು ಒಂದು ಸಲವಾದರೂ ತೋರಲಿಲ್ಲ.

ಅವಳ ಈ ಮನೋವ್ಯಾಪಾರವೇನೆಂಬುದು ನನಗೆ ತಿಳಿಯಿತೆಂದು ಹೆಮ್ಮೆಪಟ್ಟುಕೊಂಡೆ. ನನ್ನ ಮನಸ್ಸಿನಲ್ಲುಂಟಾಗುವ ಈ ಬದಲಾಣೆಯನ್ನು ಅವಳ ಮುಂದೆ ಹೇಳಿಬಿಡಬೇಕೆಂದು ಅನೇಕಸಲ ನಿಶ್ಚಯಿಸಿದೆ. ಅವಳ ಮೇಲೆ ನನಗಿರುವ ಪ್ರೇಮವನ್ನು ಬಿಚ್ಚುಮಾತಿನಿಂದ ಹೇಳಿಬಿಡಬೇಕೆಂದು ನೆನೆದೆ. ಇದು ನನ್ನ ಹುಚ್ಚುತನವೆಂದು ತಿಳಿದು, ಹಾಗೆ ದುಡುಕುವುದು ಒಳಿತಲ್ಲವೆಂಬ ನಿರ್ಧಾರಕ್ಕೆ ಬಂದೆ. ನನ್ನ ಅನುಮಾನದ ವಿಷಯ ಅವಳನ್ನೇ ಕೇಳಿಬಿಡುವುದು ನಾಚಿಕೆಗೇಡೆಂದು ಬಗೆದು, ಸುಮ್ಮನಾದೆ. ನನ್ನ ಈ ಬಗೆಯ ತಾತ್ಸಾರದ ವರ್ತನೆಯಿಂದ ಅವಳು ವ್ಯಭಿಚಾರಿಣಿಯೆಂದು ನಿರ್ಣಯಿ ಸಲು ನನಗೆ ಸಹಾಯಕವಾದವು.

ಒಂದು ದಿನ ರಾತ್ರಿ ಬಹಳ ಹೊತ್ತಾದಮೇಲೆ ಹೆಚ್ಚು ಕುದುರೆ ಸವಾರಿ ಮಾಡಿ ಮನೆಗೆ ಬಹಳ ದಣಿದು ಬಂದಳು. ನನ್ನೆದುರು ಕುಳಿತ ಅವಳ ಮುಖ ಕೆಂಪೇರಿತ್ತು. ಅವಳ ಕಣ್ಣುಗಳು ಹೆಚ್ಚಿನ ಕಾಂತಿಯಿಂದ ಮಿನುಗುತ್ತಿದ್ದವು. ಆವಳನ್ನು ಯಾವುದೋ ನೂತನವಾದ ಚೇತನವು ಆವರಿಸಿದಂತೆ ನನಗೆ ಭಾಸವಾಯಿತು. ನನ್ನನ್ನಲ್ಲದೆ ಮತ್ತಾರನ್ನೋ ಅವಳು ಪ್ರೀತಿಸುತ್ತಿರುವ

ಕೆಂಬುದು ನಿಶ್ಚಯವೆಂದು ನನಗೆನಿಸಿತು. ಆ ವಿಷಯ ಸಮಸ್ಯೆಯಾಗಿಯೇ ಉಳಿಯಿತು. ನಾನು ಜೀವಂತ ಇರುವಾಗ ನನ್ನ ಹೆಂಡತಿ ಮತ್ತೊಬ್ಬರನ್ನು ಪ್ರೀತಿಸುವುದೆ? ಗಂಡನಾದ ನನಗೆ ಇದೆಂತಹ ಅವಮಾನಕರವಾದ ವಿಷಯ? ರೋಷ, ಆವೇಶಗಳಿಂದ ನನಗೆ ಅವಳನ್ನು ನೋಡುವುದಾಗಲಿಲ್ಲ. ಮುಖ ವನ್ನು ಕಿಟಕಿಯ ಕಡೆ ತಿರುವಿದೆ. ಕಿಟಕಿಯ ಹತ್ತಿರ ನಿಂತು, ಕುದುರೆಯನ್ನು ಆಳು ಒಳಗೊಯ್ಯುವುದನ್ನು ಬಹು ಆಶೆಯಿಂದ ಅವಳು ನೋಡುವ ದೃಶ್ಯ ನನಗೆ ಕಾಣಿಸಿತು. ಆ ಕುದುರೆ ಲಾಯದಲ್ಲಿ ಪ್ರವೇಶಿಸಿದ ನಂತರ ಅವಳು ತಕ್ಷಣವೇ ಮಲಗಿ ಗಾಢನಿದ್ರೆಯಲ್ಲಿ ಮೈಮರೆತಳು. ಅವಳು ನನ್ನ ಬಗ್ಗೆ ತೋರಿದ ಈಬಗೆಯ ಅನಾದರಣೀಯ ವರ್ತನೆ ನನಗೆ ವಿಪರೀತವಾಗಿ ಕಂಡು ಬಂತು. ರಾತ್ರಿಯೆಲ್ಲವೂ ಯೋಚಿಸಿದೆ. ನನ್ನ ಮನಸ್ಸು ಏನೇನನ್ನೋ ಬಗೆಯಿತು. ಕಾಮುಕ ಹೆಣ್ಣಿನ ಹೃದಯವನ್ನು ಅರಿಯುವುದು ಕಷ್ಟವೆಂದು ಚಿಂತಿಸಿದೆ. ಆ ರಾತ್ರಿ ಕುದುರೆ ಮತ್ತು ಅದರ ಪರಿಚಾರಕನ ಮೇಲೆ ಅವಳು ತೋರಿದ ಪ್ರೇಮದ ಆದರ, ನನ್ನ ಅನುಮಾನವನ್ನು ದೃಢಪಡಿಸಿತು.

ಅವಳ ಈ ಕುದುರೆ ಸವಾರಿಯ ಹುಚ್ಚಿನ ನಿಜವಾದ ಅರ್ಥ ನನಗೆ ಆಗ ತಿಳಿಯಿತು. ದಿನವೂ ಅವಳು ಗಂಡಸಿನಂತೆ ಕುದುರೆ ಸವಾರಿಮಾಡಿ ಬಲು ಸೋತು ಮನೆಗೆ ಬರುವುದಕ್ಕೂ, ಮತ್ತು ನನ್ನನ್ನು ತುಚ್ಛೀಕರಿಸಲು ಕಾರಣ ವಾದ ಆ ಕುದುರೆಯಮೇಲೆ ನನ್ನ ಸೇಡು ತೀರಿಸಿಕೊಳ್ಳಬೇಕೆಂದು ನಿಶ್ಚಯಿಸಿದೆ. ಸರಿಯಾದ ಸಮಯಕ್ಕಾಗಿ ಕಾದುನಿಂತೆ.

ಮಾರನೆಯದಿನ ಬೆಳಗಿನಲ್ಲಿ, ಅವಳು ಎದ್ದು ಕುದುರೆ ಸವಾರಿ ಆರಂಭಿ ಸುವದಕ್ಕಿಂತ ಮುಂಚೆಯೇ ಯಾರಿಗೂ ತಿಳಿಯದಂತೆ ಮನೆಯಿಂದ ಹೊರ ಬಿದ್ದೆ. ಗುಂಡಿನಿಂದ ಬಾರುಮಾಡಿದ ಪಿಸ್ತೂಲನ್ನೂ, ಬಲವಾದ ಹಗ್ಗವನ್ನೂ ನನ್ನೊಂದಿಗೆ ತೆಗೆದುಕೊಂಡು ಹೋದೆ. ನಮ್ಮ ವಿಶಾಲವಾದ ಕಾಂಪೊಂಡಿ ನಲ್ಲಿ ಅವಳು ಕುದುರೆಯ ಸವಾರಿಗೆ ಹೊರಡುವ ರಸ್ತೆಯ ಎರಡೂ ಪಕ್ಕದಲ್ಲಿ ಎದುರೆದುರು ನಿರ್ಮಿತವಾದ ಎರಡು ಗಿಡಗಳಿಗೆ ಆ ಬಲವಾದ ಹಗ್ಗವನ್ನು ನೆಲದಿಂದ ಎರಡುಗಜದ ಎತ್ತರದಷ್ಟು ಇರುವಂತೆ ಬಲವಾಗಿ ಬಿಗಿದು, ಒಂದು ಗಿಡದ ಹತ್ತಿರವೇ ನೋಡುತ್ತ ನಿಂತೆ. ಆದೇತಾನೆ ಬೆಳಕು ಹರಿಯುತ್ತಿರು

ವಾಗ ಅವಳು ಕುದುರೆಯಮೇಲೇರಿ ಬಲು ಜೋರಿನಿಂದ ಬರುವುದನ್ನು ದೂರದಿಂದಲೇ ನೋಡಿದೆ. ಹುಚ್ಚು ಓಟದಲ್ಲಿ ಬಂದ ಆ ಕುದುರೆಯು ಹಗ್ಗವನ್ನು ಎಡವಿ ನೆಲಕ್ಕುರುಳಿತು. ಇದರ ಪರಿಣಾಮವಾಗಿ ನೆಲಕ್ಕೆ ಬೀಳುತ್ತಿದ್ದ ಅವಳ ಆಸರಕ್ಕೆ ನಾನು ಹೋಗಿ ವಿಪತ್ತಿನಿಂದ ಕಾಪಾಡಿದೆ. ಅನಂತರ ನೆಲದಿಂದ ಏಳುವುದರಲ್ಲಿದ್ದ ಆ ಕುದುರೆಯನ್ನು ಪಿಸ್ತೂಲಿನಿಂದ ಸುಟ್ಟು ಕೊಂದು ಬಿಟ್ಟೆ.

ತನ್ನ ಪ್ರೀತಿಯ ಕುದುರೆಯನ್ನು ಕೊಂದುದಕ್ಕೆ ಅವಳಿಗೆ ಬಲು ಕೋಪ ಬಂತು. ಅವಳು ನನ್ನ ಹತ್ತಿರಬಂದು, ತನ್ನ ಕೈಯಲ್ಲಿದ್ದ ಛಬುಕಿನಿಂದ ನನ್ನ ಬೆನ್ನಮೇಲೆ ಸರಿಯಾಗಿ ಎರಡುಸಲ ಥಳಿಸಿದಳು. ಮುಂದೆ ನನ್ನ ಮೈಮೇಲೇರಿ ಬರುವುದರಲ್ಲಿದ್ದಳು. ನಾನು ಆವೇಶದಿಂದ ಅವಳನ್ನೂ ಪಿಸ್ತೂಲಿನಿಂದ ಸುಟ್ಟುಬಿಟ್ಟೆ. ಅವಳು ಕೂಡಲೇ ಸತ್ತು ನೆಲಕ್ಕುರುಳಿದಳು.

ನನಗೆ ಹುಚ್ಚು ಹಿಡಿದಿದೆಯೋ ಎಂಬುದನ್ನು ನೀವೇ ನಿರ್ಧರಿಸಿರಿ. ನಿಮ್ಮ ನಿರ್ಣಯವೇನು ?

—Am I Insane ?



# ಹೆಣ್ಣು

ಜೂನ್ ತಿಂಗಳಿನ ಸಂಜೆ ಐದೂವರೆ ಸಮಯ. ಬಿಸಿಲು ಬಹಳ ವಾಗಿದ್ದುದರಿಂದ ಹವೆಯು ತುಂಬಾ ಬಿಸಿಯಾಗಿತ್ತು. ಒಂದು ಶ್ರೀಮಂತರ ಮನೆಯ ಹೊರ ಅಂಗಣದಲ್ಲಿಯ ಪೋರ್ಟಿಕೋದ ಮುಂದೆ ಕಪ್ಪು ಕುದುರೆ ಗಳಿಂದ ಎಳೆಯಲ್ಪಟ್ಟ ವಿಕ್ಟೋರಿಯಾ ಕೋಚ್‌ಗಾಡಿ ಬಂದು ನಿಂತಿತು. ಮಸ್ಕಾರೇ ಕೌಂಟೆಸ್ಸಳು ಗಾಡಿಯನ್ನೇರಲು ಮಾಳಿಗೆಯಿಂದಿಳಿದು ಬರುವ ವೇಳೆಗೆ ಸರಿಯಾಗಿ ಅವಳ ಯಜಮಾನನೂ ಮನೆಯ ಮುಂಬಾಗಿಲಿನಿಂದ ಗಾಡಿಯನ್ನು ಸಮೀಪಿಸಿದ. ತನ್ನ ಹೆಂಡತಿಯನ್ನೊಮ್ಮೆ ದಿಟ್ಟಿಸಿನೋಡಿದ. ಅವಳ ಚೆಲುವಾದ ಮುಖದಲ್ಲಿ ಅಂದು ಹೆಚ್ಚು ಗೆಲುವನ್ನು ಕಂಡ. ಅವಳ ಅಗಲವಾದ ಕಣ್ಣುಗಳು, ಸುಂದರ ದೇಹಾಕೃತಿ, ಕಪ್ಪು ಕೂದಲು, ಅಂತ ಸ್ತಿಗೆ ತಕ್ಕಂಥ ನಿಲುವೆ ಮುಂತಾದವು ನಿಜಸೌಂದರ್ಯದ ಸೊಬಗನ್ನು ಇಮ್ಮಡಿಗೊಳಿಸುತ್ತಿದ್ದವು. ಆವನಲ್ಲಿ ಯೌವನದ ಆವೇಶ ತುಂಬಿಬಂದಿತು. ಕೌಂಟನು, ಅವಳನ್ನು ಸಮೀಪಿಸಿ "ಹೊರಗೆ ಪ್ರಯಾಣವೇ" ಎಂದನು.

"ತಮಗೆ ತಿಳಿಯುವದಿಲ್ಲವೇ ?"

"ಬೂಪೋನ್ ತೋಟಗಳ ಕಡೆ ತಾನೇ ?"

"ಆಗಬಹುದು"

"ಪ್ರಿಯೆ, ನಾನೂ ನಿನ್ನ ಹಿಂದೆ ಬರಲೇ ?"

"ಈ ಸಮಸ್ತವೂ ನಿಮ್ಮದೇ ? ನನ್ನನ್ನು ಕೇಳಬೇಕೇ ?"

"ಸಂತೋಷ" ಎಂದು ಹೇಳಿ, ಅವಳ ಜತೆಗೆ ತಾನೂ ಕೋಚ ಗಾಡಿ ಯಲ್ಲಿ ಕುಳಿತು "ಗಾಡಿ ಬೋಪೋನ್ ತೋಟಕ್ಕೆ ಸಾಗಲಿ" ಎಂದು ಅಪ್ಪಣೆ ಕೊಡಿಸಿದ. ಕೋಚಮನ್ನನು ಕುದುರೆಗಾಡಿಯನ್ನು ಅದೇ ದಿಕ್ಕಿಗೆ ಓಡಿಸಿದ. ದಂಪತಿಗಳಿಬ್ಬರೂ ಮೌನದಿಂದಿದ್ದರು. ಯಾರು ಮೊದಲು

ಮಾತನಾಡಬೇಕೆಂಬುದು ಒಗಟಾಗಿತ್ತು. ಅವಳು ಅಂದೇಕೋ ಬಹಳ ಕೋಪಗೊಂಡವಳಂತೆ ಕಂಡುಬಂದುದರಿಂದ ಮಾತು ಪ್ರಾರಂಭಿಸುವುದು ಹೇಗೆಂದು ಆತನು ಯೋಚಿಸತೊಡಗಿದನು. ಬೇಕೆಂತಲೇ ಅವಳ ತೊಡೆಯ ಮೇಲಿದ್ದ ಕೈಗಳನ್ನು ಮೆಲ್ಲನೆ ತಾಕಿದ. ಅವಳು ಸಿಡುಕಿನಿಂದ ಕೈಗಳನ್ನು ಹಿಂತೆಗೆದುಕೊಂಡುದು ಅವನಿಗೆ ಆಶ್ಚರ್ಯವೆನಿಸಿತು. ಆದರೂ ಸುಮ್ಮ ನಿರದೆ "ಪ್ರಿಯೆ" ಎಂದ.

"ಏನು ಬೇಕು ?"

"ನೀನು ಇಂದು ಬಲು ಚೆಲುವಿನಿಂದ ಆಕರ್ಷಿತಳಾಗಿರುವಿ"

ಸಿಟ್ಟಿನಿಂದ ಮೋರೆಯನ್ನು ಗಂಟಿಕ್ಕಿಕೊಂಡು ಅವಳು ಸುಮ್ಮನಿದ್ದಳು. ಗಾಡಿಯು ನಗರದಲ್ಲಿ ನಿರ್ಮಿತವಾಗಿದ್ದ ಆರ್ಕ-ದ-ಟ್ರೀಯೋ ಎಂಬ ಶಿಲ್ಪದ ಹತ್ತಿರ ಸುಳಿಯಿತು. ಅಸ್ತಮಿಸುವ ಸೂರ್ಯನು ತನ್ನ ಹೊಂಬಿಸಲನ್ನು ಆ ಶಿಲಾ ವಿಗ್ರಹದ ಮೇಲೆ ಚೆಲ್ಲುತ್ತಿರುವ ಸುಂದರ ದೃಶ್ಯ ನಯನಮನೋಹರವಾಗಿತ್ತು. ಎಂತಹ ವಿರಹಿಗಳಿಗೂ ಆನಂದ ಸುಖವನ್ನು ತಂದೊಡ್ಡುವ ಸಮಯವದು. ಕೌಂಟ ಮುಸ್ಕಾರೆಸು ಮತ್ತೆ "ಪ್ರಿಯೆ ಗೇಬ್ರೀಲ್" ಎಂದ.

ಅವಳು ತೀರ ಬೇಸರದ ಸ್ವರದಲ್ಲಿ "ನನ್ನನ್ನೇಕೆ ಕಾಡುವಿರಿ ? ನನಗೇಕೋ ಇಂದು ಮನಸ್ಸಿಗೆ ನೆಮ್ಮದಿಯೆನಿಸುತ್ತಿಲ್ಲ. ಮನಶ್ಶಾಂತಿಗೆಂದು ಹೊರಗೆ ಬಂದರೆ ಇಲ್ಲಿಯೂ ನಿಮ್ಮ ಕಾಟ ತಪ್ಪಲೊಲ್ಲದು". ಎಂದು ಹೇಳಿದ ಮಾತುಗಳಿಗೆ ಲಕ್ಷ್ಯಕೊಡದೆ, ಅವನು "ಇರಲಿ ಪ್ರಿಯೆ, ಇಂದು ನಿನ್ನ ಚೆಲುವು.........." ಎಂದು ಏನನ್ನೋ ಹೇಳುವದರಲ್ಲಿದ್ದ. ಆದರೆ ಅವಳು ಮರು ಕ್ಷಣದಲ್ಲಿಯೇ ಹೆಚ್ಚು ಕೋಪದ ಭರದಲ್ಲಿ "ನಾನು ಆರೋಗ್ಯದಿಂದಿರುವುದು, ಕೆಲಸಮಯ ವಿಶ್ರಾಂತಿ ಪಡೆಯುವುದು ನಿಮಗೆ ಬೇಡೆನಿಸಿದಂತಿದೆ. ನೀವು ನಿಮ್ಮ ಕಾಮ ಚೇಷ್ಟೆಗಳಿಂದ ನನ್ನನ್ನು ಕಾಡಬೇಡಿ. ದಯವಿಟ್ಟು ಕೊಂಚ ಸುಮ್ಮನಿರುವಿರಾ ?" ಎಂದು ಹೇಳಿದಳು. ಇವಳ ಈ ಮಾತುಗಳು ಅವನಿಗೆ ರುಚಿಸಿಲಿಲ್ಲ. ಅವಳು ಸಿಟ್ಟಿಗೆದ್ದಂತೆಲ್ಲ ಅವನು ಹೆಚ್ಚು ಹೆಚ್ಚು ಕಾಮಪ್ರೇರಿತನಾಗುತ್ತಿದ್ದ. ಅದೇ ಭರದಲ್ಲಿ "ಹಾಗೆಂದರೇನು ?" ಎಂದು ಅವಳ ತೀರ ಹತ್ತಿರ ಬಂದ. ಅವನನ್ನು ತನ್ನ ಕೈಗಳಿಂದ ದೂರ ತಳ್ಳುತ್ತ

"ಸಾಕುಮಾಡಿ ನಿಮ್ಮ ಒಣ ಹರಟೆಯನ್ನು. ನಿಮ್ಮ ಕಾಮುಕ ವ್ಯಾಪಾರದ ಪರಿಣಾಮದಿಂದ ನಾನಿಷ್ಟುದಿನ ದಾಸಿಯಂತೆ ಅತೀವ ಯಾತನೆಯನ್ನು ಅನುಭವಿಸಿದೆ. ಆದರ ಫಲವನ್ನು ಉಂಡು ಹಣ್ಣಾಗಿರುವೆನು. ನಿಮ್ಮ ಸ್ವಲಾಭದ ಆಶೆಗೆ ನಾನು ಸುಮ್ಮನಿದ್ದು ನನ್ನ ಶರೀರ ಸೌಷ್ಟವವನ್ನು ಹಾಳು ಮಾಡಿಕೊಂಡಿರುವೆನು. ಎಲ್ಲವನ್ನೂ ಹೇಳಿ ಬಿಡಲೇ?''

''ಹೂ, ಹೇಳಿಬಿಡು; ಸಂಕೋಚವೇಕೆ?'' ಎಂದ

ಅವಳು ತನ್ನ ಗಂಡನತ್ತ ಮುಖ ತಿರುವಿ ಬಿರಬಿರನೆ ನೋಡುತ್ತ "ಇಂದು ನನ್ನ ಮನಸ್ಸಿನಲ್ಲಿರುವ ಭಾವನೆಗಳೆಲ್ಲವನ್ನೂ ಹೇಳಿಬಿಡುವೆನು. ಈ ನನ್ನ ಬಿಚ್ಚು ಮನಸ್ಸಿನ ಚುಚ್ಚು ಮಾತುಗಳಿಂದ ನೀವು ನೊಂದುಕೊಂಡರೂ ಚಿಂತೆಯಿಲ್ಲ. ನನಗಾರ ಭಯವೂ ಇಲ್ಲ. ನಾನಿಂದು ಈ ನಿರ್ಧಾರಕ್ಕೆ ಬಂದಿರುವೆನು" ಎಂದಳು.

"ಪ್ರಿಯೆ, ನಿನ್ನ ಮಾತು ಸರಿಯಿಲ್ಲ. ನಿನಗೆ ಹುಚ್ಚು ಹಿಡಿದಂತಿದೆ."

"ಅಹುದು ನನಗೆ ಹುಚ್ಚು ಹಿಡಿದಿದೆ. ಈ ಹನ್ನೊಂದು ವರುಷಗಳ ದಾಂಪತ್ಯ ಜೀವನದಲ್ಲಿ ನನ್ನ ಮೇಲೆ ನೀವು ಒತ್ತಾಯದಿಂದ ಹೇರಿರುವ ಹೆರಿಗೆಯ ವೇದನೆ ಸಾಲದೆಂದು, ಮತ್ತೆ ಇಂದು ನಾನು ಶೃಂಗರಿಸಿ ಕೊಂಡು, ಕೊಂಚ ಚೆಲುವಾಗಿ ಕಂಡಕೂಡಲೇ ನಿಮಗೆ ಉದ್ರೇಕವಾಯಿತೇನೋ. ಸಾಕು ಮಾಡಿ ನಿಮ್ಮ ಈ ಪಶುವೃತ್ತಿಯನ್ನು. ನನಗೂ ಕೊಂಚ ಸ್ವಾತಂತ್ರ್ಯವಿರಲಿ" ಎಂದು ಕೋಪಾವೇಶದಲ್ಲಿ ನುಡಿದ ಮಾತುಗಳು ಅವನನ್ನು ಹೆಚ್ಚು ಚಕಿತಗೊಳಿಸಿದವು.

"ನಿನ್ನ ಮಾತುಗಳು ನನಗೆ ಅರ್ಥವಾಗುತ್ತಿಲ್ಲ, ಪ್ರಿಯೆ" ಎಂದಮಾತಿಗೆ ಅವಳು ಕೆದಕಿದ ಫಣಿಯಂತೆ ತಲೆಯತ್ತಿ "ಏನು? ನನ್ನ ಈ ನುಡಿಗಳು ನಿಮಗೆ ಹೇಗೆ ತಿಳಿಯಬೇಕು? ಕೈ ಕೂಸಿಗಿನ್ನೂ ಮೂರು ತಿಂಗಳಾಗಿಲ್ಲ, ಆಗಲೇ ನಿಮ್ಮ ಕಾಮನಾಟದ ಕುಚೋದ್ಯ ಆರಂಭವಾಯಿತಲ್ಲವೇ? ಮತ್ತೆ ಬೇಗ ನಾನು ಮಗುವಿನ ತಾಯಿಯಾಗಬೇಕೆಂದು ನಿಮ್ಮ ಬಯಕೆ ತಾನೆ?"

"ಇವೇನು ನುಡಿಗಳು ಪ್ರಿಯೆ ? ಇಂತಹ ಮಾತುಗಳು ನಿನ್ನ ಮುಖ ದಿಂದ ಬರಬಾರದು".

"ಏಕೆ ಬರಬಾರದು ? ಈಗ ನನ್ನ ವಯಸ್ಸು ಮೂವತ್ತು. ಆಗಲೇ ಏಳು ಮಕ್ಕಳ ತಾಯಿಯಾಗಿರುವೆನು. ನಮ್ಮ ಈ ಹನ್ನೊಂದು ವರುಷದ ಈ ದಾಂಪತ್ಯ ಜೀವನದಲ್ಲಿ ಆಗಲೇ ಏಳು ಮಕ್ಕಳು! ಮತ್ತೇನು ಇನ್ನು ಹತ್ತು ವರುಷದಲ್ಲಿ ನನ್ನನ್ನು ಮತ್ತೆ ಏಳೆಂಟು ಮಕ್ಕಳ ತಾಯಿಯನ್ನಾಗಿಸಿ ಆನಂತರ ಸನ್ಯಾಸಿಯಾಗಬೇಕೆಂದು ಬಯಸಿರುವಿರೇನು ?"

"ಇಲ್ಲ ಪ್ರಿಯೆ, ಇಲ್ಲ. ಹೀಗೆ ನೀನು ಮಾತನಾಡುವುದು ಸರಿಯಲ್ಲ. ಇದು ನಿನಗೆ......." ಎಂದು ಅವಳ ಕೈಯನ್ನು ಬಲವಾಗಿ ಹಿಚುಕಿದ. ಅವನ ಕೈಯನ್ನು ಕೊಸರಿಕೊಳ್ಳುತ್ತ "ಅದೇಕೋ ನನಗೆ ಸರಿಬೀಳದು. ನೀವು ಹೀಗೆ ನಡುಬೀದಿಯಲ್ಲಿ ನಿಮ್ಮ ಕಾಮನಾಟವನ್ನು ಆರಂಭಿಸಿದರೆ, ಹೊರಗೆ ಗಾಡಿ ನಡೆ ಯಿಸುವ ಆಳು ಮನುಷ್ಯನನ್ನು ಕೂಗಿ ರಗಳೆಎಬ್ಬಿಸುವೆ, ತಿಳಿಯಿತೇ ? ನೀವು ಸ್ವಲ್ಪ ಎಚ್ಚರದಿಂದ ವರ್ತಿಸಿರಿ. ಮಾನವಂತರಂತೆ ನಾವು ಇರುವುದು ಒಳ್ಳೆಯದು. ಪಶುಗಳಂತೆ ನಾವು ವರ್ತಿಸುವುದು ಸರಿಯಲ್ಲ. ನಾನು ನಿಮ್ಮೆದುರು ಎಂದೂ ಸುಳ್ಳು ಹೇಳಿಲ್ಲ. ಮದುವೆಯ ಮುನ್ನ ನೀವೆಂದರೆ ನನಗೆ ಆಶೆ ಇರಲಿಲ್ಲ. ಆದರೂ ನನ್ನ ಮನಸ್ಸಿನ ವಿರುದ್ಧವಾಗಿಯೇ ಮದುವೆ ಯಾದೆ. ನನ್ನ ತಂದೆ-ತಾಯಿಗಳನ್ನು ಬಲವಂತ ಪಡಿಸಿ ನೀವು ನನ್ನನ್ನು ಮದುವೆಯಾದಿರಿ. ಧನಮದಾಂಧತೆ ನಿಮ್ಮನ್ನು ಕಾಮುಕ ವ್ಯಾಮೋಹದಲ್ಲಿ ಕೆಡವಿತ್ತು. ನಿಮ್ಮ ಐಶ್ವರ್ಯಕ್ಕೆ ಮರುಳಾಗಿ ನಮ್ಮವರು ನನ್ನನ್ನು ನಿಮ್ಮ ಕಾಮದಾಹಕ್ಕೆ ಬಲಿಯಾಗಿಸಿದರು; ನನ್ನ ಕಣ್ಣೀರಿನಿಂದಲೇ ನಿಮ್ಮನ್ನು ಮದುವೆಯಾದೆ.

"ನಿಮ್ಮ ಮನೆಯಲ್ಲಿ ಕಾಲಿಡುವಾಗ ನನಗೆ ಸಂತೋಷವಾಗಲಿಲ್ಲ. ಆನಂದ ವೆನಿಸಲಿಲ್ಲ. ನಿಮ್ಮ ಮನೆಗೆ ಬಂದ ಕೂಡಲೇ ನನ್ನನ್ನು ಪಶುವಿ ನಂತೆ ನಡೆಸಿಕೊಂಡಿರಿ. ಮಕ್ಕಳನ್ನು ಹಡೆಯುವ ಯಂತ್ರವೆಂಬಂತೆ ನನ್ನನ್ನು ಉಪಯೋಗಿಸಿಕೊಂಡಿರಿ. ನನ್ನ ವರ್ತನೆಯಲ್ಲಿ ಏನಾದರೂ ದೋಷವಿದೆಯೋ ಎಂಬಂತೆ ನನ್ನನ್ನು ಸಂಶಯಗ್ರಸ್ತ ಹೃದಯದಿಂದ ನಡೆಯಿಸಿಕೊಂಡಿರಿ.

ಹೆಂಡತಿ ನಿಮ್ಮ ಹೃದಯದ ಪುಥ್ಥಳಿಯೆಂದು ತಿಳಿಯದೆ ನಿಮ್ಮ ಕಾಮ-ಕ್ರೀಡೆಯ ಯಂತ್ರವೆಂದು ತಿಳಿದಿರಿ. ಅರ್ಧಾಂಗಿಯೆಂದು ನನ್ನ ಒಲವು ಮಮತೆಗಳನ್ನು ಅರಿಯುವ ಸಹೃದಯತೆ ನಿಮಗಿರಲಿಲ್ಲ. ಮೃಗಗಳಲ್ಲಿ ನಾವು ಇರುವ ಕರುಣೆ, ಅಂತಃಕರಣ ನಿಮ್ಮಲ್ಲಿ ತಲೆದೋರಲಿಲ್ಲ. ಇದೆಂತಹ ನೀಚವರ್ತನೆ? ನನ್ನ ಲಾವಣ್ಯ ಪ್ಯಾರಿಸ ನಗರವನ್ನೇ ಬೆರಗುಗೊಳಿಸಿತ್ತು. ಪತ್ರಿಕೆಗಳು ನನ್ನ ಚೆಲುವನ್ನು ಹೊಗಳಿ, ಅನೇಕ ಶ್ರೀಮಂತರು ನನ್ನನ್ನು ನೃತ್ಯ, ಆಟ, ಊಟಗಳ ಸಮ್ಮೇಳನಗಳಲ್ಲಿ ಕಂಡು ಹಿಗ್ಗಿದಂತೆಲ್ಲ ನೀವು ಅಸೂಯೆಯಿಂದ ನನ್ನ ಸತೀತ್ವವನ್ನೇ ಶಂಕಿಸಿದಿರಿ. ಯಾವ ಯುವಕನೂ ನನ್ನ ಹತ್ತಿರ ಬರದಂತೆ ಪ್ರಯತ್ನಿಸಿದಿರಿ. ಗರ್ಭವತಿಯಾಗುವದೊಂದೇ ನನ್ನ ಕೆಲಸವೆಂಬಂತೆ ನೀವು ವರ್ತಿಸಿದಿರಿ. ಸದಾ ಇಂತಹ ನಿರ್ಬಂಧದ ಜೀವನ ನನ್ನನ್ನು ಬೇಸರಗೊಳಿಸಿತು. ನಾನು ಹತ್ತು ಮಕ್ಕಳನ್ನು ಹೆತ್ತು, ನನ್ನ ಲಾವಣ್ಯ, ಶರೀರ ಸೌಷ್ಟವ, ಮತ್ತು ಮುಖದ ಅಂದ-ಚಂದವನ್ನು, ಕಳೆದು ಕೊಳ್ಳುವಂತೆ ನಡೆದುಕೊಂಡಿರಿ. ಇದು ನಿಜವಲ್ಲವೇ? ನಿಮ್ಮ ಸೋದರಿ ನಿಮ್ಮನ್ನು ಕುಚೇಷ್ಟೆ ಮಾಡಿದಾಗ ನೀವು ನಿಮ್ಮ ಗಂಡಸುತನದ ಬಗ್ಗೆ ಹೆಮ್ಮೆ ಪಟ್ಟುಕೊಂಡು ಹಿಗ್ಗಿದಿರಿ.

"ಅಯ್ಯೋ! ನಮ್ಮ ದಾಂಪತ್ಯ ಜೀವನದ ಆ ಮೊದಲಲ್ಲಿ ಹೋರಾಟ, ರಗಳೆ, ವೈಷಮ್ಯ ಮುಂತಾದ ದಿನಗಳನ್ನು ನೆನೆದರೆ ನನ್ನ ಮೈ ನಡುಗುತ್ತದೆ. ಹನ್ನೊಂದು ವರುಷಗಳ ವರೆಗೆ ನನ್ನನ್ನು ಕತ್ತಲುಕೋಣೆಯಲ್ಲಿರುವಂತೆ ಮಾಡಿದಿರಿ. ಗರ್ಭವತಿಯಾದಾಗ ನನ್ನ ಬಗ್ಗೆ ಬೇಸರಗೊಂಡು ನಾಲ್ಕಾರು ತಿಂಗಳುಗಳವರೆಗೆ ನನ್ನನ್ನು ಕಾಣುತ್ತಿರಲೇಇಲ್ಲ. ಮಗುವು ಹೊಟ್ಟೆಯಲ್ಲಿರು ವಾಗ ನನ್ನೊಂದಿಗೆ ಒಂದು ದಿನವಾದರೂ ತಂದೆಯೆಂಬ ಮಮತೆಯೊಂದಿಗೆ ಹಿತವಚನಗಳನ್ನು ಆಡಿದುದನ್ನು ನಾ ಕೇಳಲಿಲ್ಲ. ಸಂತೋಷದಿಂದ ನಕ್ಕು ನಲಿಯುವುದಂತೂ ಕನಸಿನ ಮಾತಾಗಿತ್ತು. ನಾನು ಮಗುವನ್ನು ಹೆತ್ತು ಮೂರುತಿಂಗಳು ಆದನಂತರ ಸುರೂಪಿಯಾಗಿ ನಿಮ್ಮ ಕಣ್ಣಿಗೆ ಬಿದ್ದಕೂಡಲೇ ನೀವು ಪಶುವಿನಂತೆ ನನ್ನನ್ನು ಕಾಮಕ್ರೀಡೆಗೆ ಎಳೆಯುತ್ತಿದ್ದಿರಿ. ಶ್ರೀಮಂತ ಮನೆಯ ಹೆಣ್ಣೆಂದು ನಾನು ಕೆಲವು ದಿನಗಳವರೆಗಾದರೂ ಸಮಾಜದಲ್ಲಿ

ಬೆರೆತು ಆನಂದಸಾಗರದಲ್ಲಿ ವಿಶ್ರಾಂತಿ ಪಡೆಯುವದು ನಿಮಗೆ ರುಚಿಸುತ್ತಿರಲಿಲ್ಲ. ನೀವು ಪತಿಯೆಂದು, ಪ್ರೇಮದಿಂದ, ಆದರದಿಂದ ನನ್ನನ್ನು ಬಯಸಿದ್ದರೆ ನಾನು ಬೇಸರಪಟ್ಟುಕೊಳ್ಳುತ್ತಿರಲಿಲ್ಲ. ಮಡದಿಯೆಂಬ ಮಮತೆಯಿಂದ ನನ್ನನ್ನು ಪ್ರೀತಿಸಿದ್ದರೆ ನಾನು ಅಸಹ್ಯಪಡುತ್ತಿರಲಿಲ್ಲ. ಯುವಕ-ಯುವತಿಯರು ಪ್ರೇಮದಿಂದ ಅಂಗಸಂಗ ವ್ಯಾಪಾರ ನಡೆಯಿಸುವುದು ಪ್ರಕೃತಿಯ ನಿಯಮಕ್ಕೆ ವಿರುದ್ಧವಲ್ಲ. ಆ ಅಭಿರುಚಿ ಸಕಲಮಾನವರಲ್ಲಿ ಇರುವುದು ಸಹಜ. ಆದರೆ ಅದು ಪಶು ಪಕ್ಷಿಗಳಂತೆ ಅನಿಯಮಿತವಾಗಿರಬಾರದು. ನನ್ನ ರೂಪು ಮಾಸುವಂತೆ ಯತ್ನಿಸುವುದು ನಿಮಗೆ ಸರಿಯಲ್ಲ.

"ನಾನು ಹೆತ್ತಮಕ್ಕಳಲ್ಲಿ ನೀವು ಮಮತೆ ತೋರುತ್ತಿರುವಿರಿ. ಇವರ ಜನನಕ್ಕೆ ನೀವು ಎಷ್ಟುಕಾರಣರೋ ನಾನೂಕೂಡ ಅಷ್ಟೇ ಕಾರಣಳಲ್ಲವೆ? ಅವರನ್ನು ಅರೈಸುವಾಗ ನನ್ನ ಬಗ್ಗೆ ಸ್ವಲ್ಪಾದರೂ ಕರುಣೆ ತೋರಬಾರದೆ ? ಮಕ್ಕಳನ್ನು ಹೆತ್ತಂತೆಲ್ಲ ನಾನು ಕೊಂಚ ದಪ್ಪಶರೀರದವಳಾಗತೊಡಗಿದೆ. ನಿಮಗಿದು ಸೇರಲಿಲ್ಲವೆಂಬಂತೆ ಕಂಡುಬಂತು. ಇದಕ್ಕೆ ನಾನು ಕಾರಣಳೆ ? ಇದರಲ್ಲಿ ನನ್ನ ಅಪರಾಧವೇನು?

"ಮಕ್ಕಳನ್ನು ನಿಮ್ಮ ವಿಜಯದ ವಸ್ತುಗಳೆಂದು ಹಿಗ್ಗಿದಿರಿ. ಅವು ನಿಮ್ಮ ರಕ್ತಸಂಬಂಧಿಗಳೆಂದು ಭಾವಿಸಲಿಲ್ಲ. ನನ್ನ ಚೆಲುವು ಯೌವನ ಬಾಳಿನ ನೂತನತೆಯನ್ನು ಹಾಳುಮಾಡಿದೆನೆಂಬ ಹೆಮ್ಮೆ ನಿಮಗಾಗುತ್ತಿದ್ದುದನ್ನು ನಾನು ಕಂಡು ಮನದಲ್ಲಿಯೇ ಮರುಗಿದೆ. ಮಕ್ಕಳೊಂದಿಗೆ ನೀವು ಅನೇಕಸಲ ವಿಹರಿಸಿದಿರಿ. ಅವರನ್ನು ಆಟಪಾಟಗಳಿಗೆ ಕರೆದೊಯ್ದಿರಿ, ಅವರೊಂದಿಗೆ ವಿಜಯಿಶಾಲಿಯಾದ ಯೋಧನಂತೆ ಮೆರೆದಿರಿ. ಈ ಸಮಯಗಳಲ್ಲಿ ನನ್ನನ್ನು ನಿಮ್ಮೊಂದಿಗೆ ಕರೆದೊಯ್ಯುವ ಮನಸ್ಸು ನಿಮಗೆ ಒಂದುಸಲವಾದರೂ ಆಗದಿದ್ದುದು ನನಗೆ ಬಲು ಕೆಡುಕೆನಿಸುತ್ತದೆ. ಜನರು ನಿಮ್ಮನ್ನು "ಒಳ್ಳೆಯತಂದೆ" ಎಂದು ಹೊಗಳುವುದುಬೇಕಿತ್ತು. ನಾವು ಇಬ್ಬರೂ ಜನರಲ್ಲಿ ನಕ್ಕು ನಲಿಯುವ ಸನ್ನಿವೇಶಗಳನ್ನು ಕಂಡು ನಿಮ್ಮನ್ನು "ಪ್ರೀತಿಯ ಗಂಡ" ಎಂದು ಕರಿಸಿಕೊಳ್ಳುವುದು ನಿಮಗೆ ಬೇಡಾಗಿತ್ತು. ಎಂದು ತನ್ನ ಹೃದಯದಲ್ಲಾಗುತ್ತಿದ್ದ ಸಂಕಟವನ್ನು ತೋಡಿಕೊಂಡಳು.

ಇಷ್ಟಾದರೂ ಅವನು ಅವಳ ಕೈಯ ಹಿಡಿತವನ್ನು ಸಡಿಲಿಸಿರಲಿಲ್ಲ. ಬಲವಾದ ಹಿಡಿತದಿಂದ ಅವಳ ಕೈ ನೋಯುತ್ತಿತ್ತು. 'ಅಯ್ಯೋ'ಯೆಂದು ಮೆಲ್ಲನೆ ನುಡಿದಾಗ ಅವನು "ಗೇಬ್ರೀಲ್, ನಿನ್ನ ಈ ಮಾತುಗಳು ಸಂಸಾರಿಗಳಾದ ನಿನ್ನಂತಹ ಹೆಣ್ಣಿಗೆ ಒಳ್ಳೆಯವಲ್ಲ. ಮಕ್ಕಳನ್ನು ಮಮತೆಯಿಂದ ಕಾಣುತ್ತಿರುವೆನು. ಅವರು, ನೀನೂ ನನ್ನವರು. ನಾನು ನಿಮ್ಮೆಲ್ಲರ ಒಡೆಯನು. ನನ್ನ ಇಚ್ಛೆಯಂತೆ ನಡೆದುಕೊಳ್ಳಬೇಕಾದುದು ಹೆಂಡತಿಯಾದ ನಿನ್ನ ಆದ್ಯ ಕರ್ತವ್ಯ; ನಾನು ಹೇಳಿದಂತೆ ನನ್ನ ಮನದ ಬಯಕೆಯಂತೆ ನಡೆದುಕೊಳ್ಳುವಂತೆ ನಿನ್ನನ್ನು ಬಲಾತ್ಕರಿಸಲು ನನಗೆ ಹಕ್ಕಿದೆ. ನ್ಯಾಯ ನನ್ನ ಕಡೆ ಇದೆ........" ಎಂದು ಪಶುವಿನಂತೆ ಅವಳ ಕೈಯನ್ನು ಒತ್ತುತ್ತ ಮೆಲ್ಲನೆ ನುಡಿದ. ಅವಳಿಗಾಗುತ್ತಿರುವ ನೋವಿನ ಅರಿವೇ ಅವನಿಗಿರಲಿಲ್ಲ. ತನಗಾದ ಪರಾಭವದ ಪರಿಣಾಮವೆಂಬಂತೆ ಅವಳ ಕೈ ಬೆರಳುಗಳನ್ನು ಒತ್ತತೊಡಗಿದ. ಕೋಮಲೆಯಾದ ಅವಳು ನೋವಿನಿಂದ ನರಳಿದಳು. ಕಣ್ಣಿನಿಂದ ಹನಿಗಳುದುರತೊಡಗಿದವು.

ಮತ್ತೊಮ್ಮೆ ಅವಳ ಕೈಬೆರಳುಗಳನ್ನು ಹಿಚುಕುತ್ತ "ನಾನು ನಿನ್ನೊಡೆಯ, ಬಲಶಾಲಿ" ಎಂದು ಹೇಳಿ ಕೈಹಿಡಿತ ಕೊಂಚ ಸಡಲಿಸಲು ಅವಳು ಕೈಗಳನ್ನು ಕೋಪದಿಂದ ಕೊಸರಿಕೊಂಡು "ಒಂದುಮಾತು, ನಾನು ಇಲ್ಲಿಯವರೆಗೆ ಶೀಲವಂತಳಾಗಿ ಉಳಿದಿರುವೆನೆಂದು ನಿಮಗೆ ನಂಬಿಕೆ ಇದೆಯೇ?" ಎಂದು ಕೇಳಿದಳು.

ಈ ಕೊನೆಯ ಮಾತುಗಳಿಗೆ ಅವನು ಆಶ್ಚರ್ಯಹೊಂದಿ "ಏನದು?" ಎಂದ.

"ಏನೂ ಇಲ್ಲ. ನೀವು ನನ್ನೊಂದಿಗೆ ಕ್ರೈಸ್ತ ಮಂದಿರಕ್ಕೆ ಬನ್ನಿ. ಅಲ್ಲಿ ನಿಮಗೆಲ್ಲವನ್ನೂ ಪೂಜ್ಯ ಶಿಲುಬೆಯ ಮುಂದೆ ಪ್ರಮಾಣ ಮಾಡಿ ಹೇಳುವೆನು. ಬರುವಿರಾ ?" ಎಂದು ಹೇಳಿ ಅವಳು ಕೋಚಗಾಡಿಯನ್ನು ಹತ್ತಿರವೇ ಇದ್ದ ಪ್ರಾರ್ಥನಾಮಂದಿರದತ್ತ ನಿಲ್ಲಿಸಬೇಕೆಂದು ನುಡಿದಳು. ಮಂದಿರವನ್ನು ಮೌನದಲ್ಲಿಯೇ ಇಬ್ಬರೂ ಪ್ರವೇಶಿಸಿದರು. ಶಿಲುಬೆಯ ಮುಂದೆ ಇದ್ದ ಕುರ್ಚಿಗೆ ತಲೆಯನ್ನು ಆನಿಸಿ ಬಹಳ ಹೊತ್ತು ಪ್ರಾರ್ಥಿಸಿದಳು. ತಲೆಯನ್ನು

ತಗ್ಗಿಸಿ ಪ್ರಾರ್ಥಿಸುವಾಗ ಅವಳು ಆವೇಶದಿಂದ ದುಃಖಿಸುತ್ತಿರುವಂತೆ ಹಿಂದೆ ನಿಂತು ನೋಡುತ್ತಿದ್ದ ಗಂಡನಿಗೆನಿಸಿತು. ಅಮಿತ ದುಃಖದಲ್ಲಿ ಮುಳುಗಿದವರಂತೆ ಅವಳು ರೋದಿಸುತ್ತಿರುವುದು ಅವನಿಗೆ ಆಶ್ಚರ್ಯವೆನಿಸಿತು. ಬಹಳ ಹೊತ್ತು ಅವಳು ಮೈಮರೆತು ಕುಳಿತಿರುವುದನ್ನು ಕಂಡು, ಅವಳನ್ನು ಬೆನ್ನಿನ ಮೇಲೆ ಕೈಸವರುತ್ತ ಎಚ್ಚರಿಸಿದ.

ದುಃಖದ ಆವೇಶದಲ್ಲಿ ಮೈಮರೆತ ಅವಳಿಗೆ ಆಗ ತಾನೆಲ್ಲಿರುವೆನೆಂಬುದು ಅರಿವಾಯಿತು. ಚೇತರಿಸಿಕೊಂಡು ಎದ್ದು ನಿಂತು, ಅವನ ಕಡೆಗೆ ತಿರುಗಿ, ದಿಟ್ಟಿಸಿ ನೋಡುತ್ತ "ನಿಮ್ಮೆದುರು ಹೇಳಬೇಕಾದ ವಿಷಯವಿದು. ನೀವು ಏನೆಂದರೂ ಸರಿಯೆ, ಏನು ಮಾಡಿದರೂ ಸರಿಯೆ, ನಿಜಾಂಶವನ್ನು ಹೇಳಿಬಿಡುವೆನು. ಈ ನಮ್ಮ ಮಕ್ಕಳಲ್ಲಿ ಓರ್ವನು ಮಾತ್ರ ನಿಮ್ಮ ಸಂಪರ್ಕದಿಂದ ಜನಿಸಿಲ್ಲವೆಂದು ಖಂಡಿತವಾಗಿ ಹೇಳಬಲ್ಲೆ. ಇಷ್ಟು ದಿನ ನೀವು ನನ್ನೊಂದಿಗೆ ಪಶುವಿನಂತೆ ವರ್ತಿಸಿದುದಕ್ಕೆ ಈ ರೀತಿಯಾಗಿ ಸೇಡು ತೀರಿಸಿಕೊಂಡೆ. ಪುರುಷನು ಸ್ತ್ರೀ–ಜನಾಂಗದ ಮೇಲೆ ನಡೆಸುವ ಅಕ್ರಮ, ಈ ಮಕ್ಕಳು ಹೆರುವ ಕಷ್ಟ ಉದ್ಯೋಗಕ್ಕೆ ನಮ್ಮನ್ನು ಯಂತ್ರಗಳಂತೆ ಉಪಯೋಗಿಸುವ ನಿಮ್ಮ ಸ್ವಾರ್ಥ, ಮುಂತಾದವುಗಳ ಅರಿವು ನಿಮಗೆ ಆಗಲೆಂದು ನಾನೋರ್ವನಿಗೆ ಸೇಡಿನ ಸ್ವಭಾವದಿಂದಲೇ ನನ್ನ ಶರೀರವನ್ನು ಅರ್ಪಿಸಿದೆ. ನನ್ನ ಆ ಪ್ರಿಯನಾರೆಂಬುದು ನೀವು ತಿಳಿಯಲಾರಿರಿ. ನೀವು ಎಲ್ಲ ಮಿತ್ರರನ್ನೂ ಶಂಕಿಸಬಹುದು ಆದರೆ ಆ ಮಗುವಿನ ಜನನಕ್ಕೆ ಕಾರಣನಾದವನಾರೆಂಬುದನು ನೀವು ತಿಳಿಯಲಾರಿರಿ. ನಾನು ಅವನನ್ನು ಮನಸಾರೆ ಪ್ರೀತಿಸಿ ವಶವಾಗಲಿಲ್ಲ. ಕಷ್ಟವಾದ ಈ ಮಕ್ಕಳ ಜನನಕ್ಕೆ ಯಂತ್ರದಂತೆ ನನ್ನನ್ನು ಉಪಯೋಗಿಸುತ್ತಿದ್ದ ವಿಧಾನಕ್ಕೆ ಅವನಲ್ಲಿ ನನಗೆ ಪ್ರೇಮವಿರದಿದ್ದರೂ ನಿಮಗೆ ಬುದ್ಧಿ ಕಲಿಸುವ ಉದ್ದೇಶದಿಂದ ಅವನಿಗೆ ವಶಳಾದೆ. ಅವನಿಂದ ಆ ಒಂದು ಮಗುವನ್ನು ಹೆತ್ತಿರುವೆನು. ಆ ಮಗುವನ್ನು ನೀವು ಗುರುತಿಸಲಾರಿರಿ. ನನಗೆ ಮಾತ್ರ ಅದು ತಿಳಿದಿದೆ. ನಿಮಗೆ ಈ ವಿಷಯವನ್ನು ಸಮಯ ಬಂದಾಗ ಹೇಳುವೆನು. ಇಂದು ನೀವೇ ಈ ಬಲಾತ್ಕಾರ ವರ್ತನೆಯಿಂದ ಈ ರಹಸ್ಯ ವ್ಯಾಪಾರವನ್ನು ನನ್ನ ಬಾಯಿಂದಲೇ ಹೊರಗೆಡವಿದಿರಿ. ನನ್ನ ವರದಿ ಇಲ್ಲಿಗೆ

ಮುಗಿಯಿತು ಇನ್ನು ನಿಮಗೆ ತೋರಿದಂತೆ ನಡೆದುಕೊಳ್ಳಬಹುದು" ಎಂದು ದೇವಮಂದಿರದಲ್ಲಿ ಹೇಳಿಕೆಕೊಟ್ಟಳು.

ಅವಸರದಿಂದ ದುಃಖತುಂಬಿದ ಹೃದಯದಿಂದ ಮಂದಿರದ ಹೊರಬಾಗಿಲತ್ತ ನಡೆದಳು. ಗಂಡನು ಕೋಪ, ತಾಪ, ರೋಷಗಳ ಆವೇಶದಲ್ಲಿ ತನ್ನನ್ನು ಆ ಮಂದಿರದಲ್ಲೇ ಶಿಕ್ಷಿಸುವೆನೆಂದು ಆವಳು ನಿರೀಕ್ಷಿಸುತ್ತ ಮುಂದೆ ಸಾಗಿ ಗಾಡಿಯನ್ನು ವೇಗದಿಂದ ಹತ್ತಿಕುಳಿತಳು. ಅವಳನ್ನು ಹೇಳಲಾರದಷ್ಟು ದುಃಖ, ಪರಿತಾಪ, ಮತ್ತು ಭಯ ಮುಂತಾದವು ಆವರಿಸಿಕೊಂಡಿದ್ದವು. ಗಾಡಿಯಲ್ಲಿ ಕುಳಿತವಳೇ ''ಗಾಡಿಯು ಮನೆಗೆ ಹೋಗಲಿ" ಎಂದು ಅಪ್ಪಣೆ ಇತ್ತಳು. ಗಾಡಿಯು ಅವಳ ಮನೆಯತ್ತ ತೆರಳಿತು.

ಮನೆಗೆ ಬಂದವಳೇ ತನ್ನ ಕೋಣೆಯಲ್ಲಿ ಊಟದ ಕರೆಗಾಗಿ ಕಾದು ಕುಳಿತಿದ್ದಳು. ನ್ಯಾಯಾಧೀಶನಿಂದ ತೀರ್ಪನ್ನು ಎದುರು ನೋಡುತ್ತಿರುವ ಅಪರಾಧಿಯಂತೆ ಅವಳ ಮನಸ್ಸು ಗೊಂದಲದಲ್ಲಿತ್ತು. ತನ್ನ ಗಂಡನು ಮನೆಗೆ ಬಂದನೇ ಇಲ್ಲವೇ ಅವನಿಗೆ ಏನಾಯಿತು ಎಂಬುದನ್ನು ತಿಳಿಯುವ ಗೋಜಿಗೆ ಹೋಗಲು ಮಂದಿರದಲ್ಲಿರುವಾಗ ಅವಳಿಗೆ ಹೊಳೆಯಲೇ ಇಲ್ಲ. ಅವನು ಸ್ವಭಾವತಃ ಬಹುಕ್ರೂರಿ, ಹಠಮಾರಿ, ಮನೆಯಲ್ಲಿಯ ಸಂಪೂರ್ಣ ಮೌನವಾದ ವಾತಾವರಣ ಅವಳ ಮನಸ್ಸಿಗೆ ಖೇದವನ್ನುಂಟುಮಾಡಿತು. ನಿಮಿಷಕ್ಕೊಂದು ಸಲ ಗಡಿಯಾರದ ಕಡೆ ನೋಡುತ್ತ ಸುಮ್ಮನೆ ಕುಳಿತಿದ್ದಳು. ಎಂಟು ಗಂಟೆಗೆ ಮನೆಯ ಆಳು ಬಂದು ಬಾಗಿಲನ್ನು ಬಡಿದು ಒಳಗೆ ಬಂದು ಊಟ ಸಿದ್ಧವಿದೆಯೆಂದು ಹೇಳಿದ.

''ಯಜಮಾನರು ಬಂದಿರುವರೆ?"

''ಆಹುದು ಬಂದಿರುವರು. ಊಟದ ಹಾಲಿನಲ್ಲಿರುವರು"

ಊಟದ ಭವನದಲ್ಲಿ ರಗಳೆಯಾಗಹುಬದೆಂದು ಸಮಯಕ್ಕೆ ಅನುಕೂಲವಾಗುವಂತೆ ಪಿಸ್ತೂಲನ್ನು ಹತ್ತಿರ ಇಟ್ಟುಕೊಳ್ಳುವುದು ಒಳಿತೇ ಯೆಂದು ನೆನೆ

ದಳು. ಆದರೆ ಅಂತಹ ಪ್ರಸಂಗವೇನೂ ಬರಲಾರದೆಂದು ನಿಶ್ಚಯಿಸಿ ಹೊರಟಳು. ಊಟವು ಮೌನದಲ್ಲಿಯೇ ಮುಗಿಯಿತು. ತನ್ನ ಆರು ಮಂದಿ ಮಕ್ಕಳು ಅವರ ಪಾಲನೆಗೆ ನಿಯಮಿತರಾದ ಓದು ಹೇಳುವ ಮಾಸ್ತರರಾದ ಮಾರ್ಟನ್ನರೂ, ದಾದಿಯಾದ ಮಿಸ್ ಸ್ಮಿತ್‌ರೂ ಕುಳಿತಿದ್ದರು. ಊಟದ ನಡುವೆ ಕೌಂಟ ಮಸ್ಕಾರೇ ತನ್ನ ಮಕ್ಕಳನ್ನು ಪರೀಕ್ಷಿಸಿ ನೋಡುತ್ತಿದ್ದುದು ತಲೆಬಾಗಿ ಊಟ ಮಾಡುತ್ತಿದ್ದ ಗೇಬ್ರಿಯಲಳಿಗೆ ಗೊತ್ತಿರಲಿಲ್ಲ. ತನ್ನ ಗಂಡನು ಊಟವು ಮುಂದರಿದ ಕೆಲ ಸಮಯದ ನಂತರ ತನ್ನ ಕೈಯೊಳಗಿನ ಪಾನೀಯದ ಗ್ಲಾಸು ತಪ್ಪಿ ಕೆಳಗೆ ಬಿದ್ದಾಗ ಆದ ಸಪ್ಪಳದಿಂದ ಅವಳು ತಲೆಯೆತ್ತಿ ನೋಡಿದಾಗ ಗಂಡಹೆಂಡಿರ ದೃಷ್ಟಿಗಳು ಒಂದಾದವು.

ಇವರಿಬ್ಬರ ಮೌನಕ್ಕೆ ಮಹತ್ತರವಾದ ಕಾರಣವಿರಬೇಕೆಂದು ತರ್ಕಿಸಿದ ಮಾಸ್ತರನಾದ ಮಾರ್ಟನ್ನನು, ಅನೇಕ ವಿಷಯಗಳ ಬಗ್ಗೆ ಚರ್ಚೆ ನಡೆಸಿದ. ಆದರೆ ಹೆಚ್ಚಿನ ಗೊಂದಲದಲ್ಲಿದ್ದ ಅವಳು ಆತನ ಪ್ರಶ್ನೆಗಳಿಗೆ ಸರಿಯಾಗಿ ಉತ್ತರಿಸಲಿಲ್ಲ. ಈ ಗೊಂದಲವನ್ನರಿತ ಅವಳ ಗಂಡನು ಅವಳನ್ನುದ್ದೇಶಿಸಿ ''ನಿನ್ನ ಮಕ್ಕಳ ಎದುರಿಗೆ ನೀನು ಆಗ ಹೇಳಿದ ವಿಷಯವನ್ನು ಪ್ರಮಾಣ ಮಾಡಿ ಒಪ್ಪಿಕೊಳ್ಳಬಲ್ಲೆಯಾ?" ಎಂದು ಕೇಳಿದ.

ಅವಳ ಮನಸ್ಸು ತೀರ ಬೇಸರಗೊಂಡಿತ್ತು. ಕೋಪ ತಾಪಗಳಿಂದ ಬೆಂದು ಬೇಗುದಿಯಾಗಿತ್ತು. ತನ್ನೆರಡು ಪಕ್ಕದಲ್ಲಿ ಕುಳಿತಿದ್ದ ಮಕ್ಕಳ ಕಡೆ ಕೈಮಾಡಿ ''ಈ ಮಕ್ಕಳಾಣೆಯಾಗಿ ನಾನು ಹೇಳಿದುದರಲ್ಲಿ ಸುಳ್ಳೆಂಬುದು ಇಲ್ಲ" ಎಂದು ಸ್ಥಿರಮನಸ್ಸಿನಿಂದ ಒಪ್ಪಿಕೊಂಡಳು.

ಅವನು ಮರುಕ್ಷಣದಲ್ಲಿಯೇ ರೋಷಾವೇಶದಲ್ಲಿ ಟೇಬಲದ ಮುಂದಿನ ಕುರ್ಚಿಗಳನ್ನು ಅಸ್ತವ್ಯಸ್ತವಾಗಿ ಚದುರಿಸಿ ಊಟವನ್ನು ಸಹಾ ಪೂರ್ತಿ ಮುಗಿಸದೆ ಆ ಭವನದಿಂದ ಹೊರಟುಹೋದ. ಆತನ ನಿಷ್ಕ್ರಮಣದ ನಂತರ ಅವಳು ತನ್ನ ಮಕ್ಕಳನ್ನುದ್ದೇಶಿಸಿ "ಮಕ್ಕಳಿರಾ ನೀವು ಗೊಂದಲದಲ್ಲಿ ಬೀಳಬೇಡಿ. ನಿಮ್ಮ ತಂದೆಯವರ ಈ ವರ್ತನೆ ತಾತ್ಕಾಲಿಕವಾದುದು. ಎಲ್ಲವೂ ತಾನಾಗಿಯೇ ಸರಿಹೋಗುವುದು'' ಎಂದು ನುಡಿದು ಅಲ್ಲಿದ್ದ ಆಗಂತುಕ

ರೊಡನೆ ಸಮರೀತಿಯಲ್ಲಿ ಮಾತನಾಡಿ ತನ್ನ ಮಕ್ಕಳೊಂದಿಗೆ ಪಕ್ಕದ ವಿಶಾಲ ವಾದ ಭವನದಲ್ಲಿ ಕೊಂಚ ಸಮಯ ಹರಟೆ ಹೊಡೆದು ಅವರನ್ನು ಬಲು ಅಕ್ಕ ರೆಯಿಂದ ಮುದ್ದಿಸಿದ ನಂತರ ಆ ದಾದಿಗೆ ಒಪ್ಪಿಸಿ, ತನ್ನ ಮಲಗುವ ಕೋಣೆಗೆ ಶಾಂತಚಿತ್ತದಿಂದ ತೆರಳಿದಳು.

ಗಂಡನು ತಾನೊಬ್ಬಳೇ ಇದ್ದಾಗ ಬಂದು ಮತ್ತೆ ದಂಡಿಸುವನೆಂದು ಅವಳು ನೆನೆದಳು. ರಹಸ್ಯದಲ್ಲಿ ತಾವಿಬ್ಬರೇ ಇರುವಾಗ ವಿಷಯ ವಿಕೋಪಕ್ಕೆ ಹೋದರೆ ತನ್ನ ಮರ್ಯಾದೆಯನ್ನು ಕಾಪಾಡಿಕೊಳ್ಳಲು ತನ್ನ ಉಡುಗೆಗಳ ನಡುವೆ ಪಿಸ್ತೂಲನ್ನು ಬಚ್ಚಿಟ್ಟುಕೊಂಡಿದ್ದಳು. ಗಂಟೆಗಳುರುಳಿದಂತೆಲ್ಲ ಹೊರಗೆ ಬೀದಿಯ ಮತ್ತು ಮನೆಯೊಳಗಿನ ಸದ್ದೆಲ್ಲವೂ ಅಡಗಿತು. ಆದರೆ ಅವಳು ನಿರೀಕ್ಷಿಸಿದಂತೆ ಯಾರೂ ಬರಲಿಲ್ಲ. ಅದೇ ಮನೋನಿಶ್ಚಯದಲ್ಲಿಯೇ ರಾತ್ರಿಯೆಲ್ಲವನ್ನೂ ಕುರ್ಚಿಯ ಮೇಲೆ ಕುಳಿತು ಕಳೆದುದು ಬೆಳಗಿನ ಐದು ಗಂಟೆ ಸಮಯಕ್ಕೆ ಅವಳಿಗೆ ಎಚ್ಚರವಾದಾಗ ತಿಳಿದು ಬಂತು. ಆಗ ಆತನು ಬರಲೇ ಇಲ್ಲವೆಂದು ತಿಳಿದು ಯಾವ ಭಯವೂ ಇಲ್ಲದೆ ಹಾಸಿಗೆಯನ್ನು ಸೇರಿ ಮಲಗಿದಳು. ಆದರೆ ನಿದ್ದೆ ಬರಲೇ ಇಲ್ಲ. ಮುಂಜಾವಿನ ಟೀಯನ್ನು ದಾದಿಯು ತಂದಿರಿಸಿದಾಗ ಗಂಡನಿಂದ ಅವಳಿಗೆಂದು ಬರೆಯಲ್ಪಟ್ಟ ಕಾಗದವೊಂದು ಅದರಲ್ಲಿತ್ತು. ಅದರಲ್ಲಿ ತಾನು ದೀರ್ಘಕಾಲದ ಪ್ರವಾಸದ ಮೇಲೆ ಹೋಗಿ ರುವುದರಿಂದ ಬಹು ದಿನಗಳವರೆಗೆ ಊರಿಗೆ ಬರುವುದಿಲ್ಲವೆಂದು ತಮ್ಮ ಮನೆಯ ವಕೀಲನ ಮುಖಾಂತರ ಮನೆತನದ ವೆಚ್ಚಕ್ಕೆ ಸರಿಯಾದ ಏರ್ಪಾಟು ಮಾಡ ಲಾಗಿದೆಯೆಂದು ಕಾಣಿಸಿದ್ದ.

ಓಪೇರಾ ಥಿಯೇಟರಿನಲ್ಲಿ ಅಂದು ಹೆಸರಾಂತ "ಭೂತಾಕಾರದ ರಾಬರ್ಟ" (Robert the Devil) ಎಂಬ ನಾಟಕದ ಎರಡನೆಯ ಅಂಕವು ನಡೆದಿತ್ತು. ಶ್ರೀಮಂತರೆಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ದಿವ್ಯ ಅಲಂಕಾರಗಳಿಂದ ತಮ್ಮ ಐಶ್ವರ್ಯವನ್ನು ನಾಟಕವನ್ನು ನೋಡುವದಕ್ಕಿಂತ ಪ್ರೇಕ್ಷಕರಿಗೆ ತೋರಿಸುವ ಕಾರಣದಿಂದಲೇ ತಮ್ಮ ಸೀಟುಗಳಲ್ಲಿ ಸುಮ್ಮನೇ

ಕುಳಿತುಕೊಳ್ಳದೇ ಕಾರಣವಿಲ್ಲದೇ ಅತ್ತಿಂದಿತ್ತ ತಿರುಗಾಡುತ್ತಿದ್ದರು. ಈ ಜನರ ವಿಲಾಸ, ವೈಭವ, ಅದರಲ್ಲಿ ಹೆಚ್ಚಾಗಿ ಹೆಂಗಳೆಯರ ಚೆಲುವು ಒಲವು ಗಳನ್ನು ಕಂಡು ಆನಂದಿಸುವವರ ತಂಡವೇ ಹೆಚ್ಚೆಂದು ಹೇಳಬಹುದು. ಈ ನಾಟಕವನ್ನು ನೋಡಲು ಕೌಂಟೆಸ್ಸ ಮಾಸ್ಕಾರೇ ಕೂಡ ಬಂದಿದ್ದಳು.

ದೂರದಲ್ಲಿ ಕುಳಿತಿದ್ದ ರೋಜರ್-ದ-ಶಾಲೇ ಮತ್ತು ಬರ್ನಾರ್ಡ ಗ್ರಾಂಡಿ, ಎಂಬವರು ಅತ್ಯಂತ ರೂಪವತಿಯಾದ ಈ ಕೌಂಟೆಸ್ಸಳನ್ನು ದಿಟ್ಟಿಸಿ ನೋಡುತ್ತಲಿದ್ದರು. ರೋಜರನು ತನ್ನ ಮಿತ್ರರನ್ನುದ್ದೇಶಿಸಿ "ಏಳು ಮಕ್ಕಳ ತಾಯಿಯಾದರೂ, ಈಗ ಅವಳೆಷ್ಟು ಸುಂದರವತಿಯಾಗಿ ಕಾಣುವಳು" ಎಂದು ಹೇಳಿದ ಇವನಿಗಿಂತಲೂ ಕೊಂಚ ಹಿರಿಯನಾದ ಬರ್ನಾರ್ಡನು ಅವ ಳನ್ನು ಮತ್ತೊಮ್ಮೆ ನೋಡಿ ಅವಳ ಎತ್ತರವಾದ ನಿಲುವು ಮತ್ತು ಚೆಲುವು ಅಲ್ಲಿ ಸೇರಿದ ಸಮಸ್ತ ಸ್ತ್ರೀಯರಿಗಿಂತಲೂ ಹೆಚ್ಚು ಆಕರ್ಷಣೀಯವಾಗಿದೆ ಯೆಂಬ ನಿಶ್ಚಯಕ್ಕೆ ಬಂದ ಅವರಿಬ್ಬರೂ ಅವಳ ವಯಸ್ಸಿನ ಬಗ್ಗೆ ತರ್ಕಿಸಿ ದರು. ಮೂವತ್ತಾರೆಂದು ಒಬ್ಬನೆಂದರೆ ಇಲ್ಲ ಇಪ್ಪತ್ತೈದೆಂದು ಮತ್ತೊಬ್ಬನು ಒತ್ತಿ ಹೇಳಿದ. ಬರ್ನಾರ್ಡನು ಅವಳ ಪರಿಚಯವಿದೆಯೆಂದು ಹೇಳಿದ ಮೇಲೆ, ಅವಳ ವಯಸ್ಸು ಮೂವತ್ತಾರೆಂದು ನಿರ್ಧರಿಸಿದರು. ಅನಂತರ ಅವಳ ಗಂಡನ ವಿಷಯ ಮಾತು ತೆಗೆದು ಅವನೋರ್ವ ವಿಕ್ಷಿಪ್ತ ಜೀವಿ ಯೆಂದು "ನನಗೇನೋ ಇವರಿಬ್ಬರಲ್ಲಿ ಒಂದು ಬಗೆಯ, ಸಾಮಾನ್ಯವಾಗಿ ಶ್ರೀಮಂತ ಮನೆತನಗಳಲ್ಲಿ ಕಂಡು ಬರುವ, ಗಂಡಹೆಂಡಿರ ಮನಸ್ತಾಪದ ಪ್ರಕ ರಣ ವಿಕೋಪಕ್ಕೆ ಹೋದಂತೆ ಕಂಡುಬರುತ್ತದೆ. ಹೆಂಡತಿಯ ಶೀಲದಲ್ಲಿ ಏನೋ ತಪ್ಪನ್ನು ಕಂಡು ಅವಳಿಂದ ದೂರಿರುವುದೇ ಅದಕ್ಕೆ ಸರಿಯಾದ ಪರಿ ಹಾರವೆಂದು ನಿಶ್ಚಯಿಸಿ ಅವನು ದೇಶಾಂತರ ಹೋದಂತೆ ಕಾಣುತ್ತದೆ. ತಾನು ಶಕ್ತಿವಂತನಿದ್ದಾಗ ಅವಳೊಂದಿಗೆ ಸರಿಯಾಗಿ ನಡೆದುಕೊಂಡ, ಆದರೆ ಈಗ ಅವನಿಗೆ ವಯಸ್ಸಾದಂತೆ ಕಾಣುತ್ತದೆ. ಇಲ್ಲ ಸಲ್ಲದ ವಿಷಯದಲ್ಲಿ ರಗಳೆ ಆರಂಭಿಸಿದೆ ಎಂದು ನನಗೆ ಕಂಡುಬರುತ್ತದೆ" ಎಂದ.

ಮುಂದೆ ಅವರಿಬ್ಬರು ದಂಪತಿಗಳ ಇಜ್ಜೋಡು ಜೀವನಗಳು ಬಲು ಬೇಸರದಿಂದ ಕೂಡಿರುವವೆಂತಲೂ ಸತಿಪತಿಗಳು ಒಬ್ಬರನ್ನೊಬ್ಬರು ಅರಿತು

ಕೊಳ್ಳದೆ ಪರಸ್ಪರ ಸಮವರ್ತಿಗಳಾಗದಿದ್ದರೆ ಅಂಥವರಲ್ಲಿ ಭೇದಭಾವಗಳುದ್ಭ ವಿಸುವುದು ನಿಶ್ಚಯವೆಂದು ತರ್ಕಿಸಿದರು. ಆಗ ರೋಜರ್‌ನು ಅವಳ ಕಡೆ ದೃಷ್ಟಿಯನ್ನಿಟ್ಟು "ಏನೆಂದರೂ ಈಗ ಏಳು ಮಕ್ಕಳ ತಾಯಿಯೆಂದು ಹೇಳಿದರೆ ನಂಬಲಾರದಷ್ಟು ಚೆಲುವು, ದೇಹಸೌಷ್ಟವ, ಅವಳದಾಗಿರುವುದು" ಎಂದ "ಇದರ ರಹಸ್ಯ ಹೀಗಿದೆ; ಏಳು ಮಕ್ಕಳನ್ನು ಹೆತ್ತ ನಂತರ ತನ್ನ ಮೂವತ್ತನೇ ವಯಸ್ಸಿನಲ್ಲಿರುವಾಗ ಗಂಡನಿಂದ ದೂರ ಸರಿದು ನಿಂತಳು. ಮುಂದೆ ಗರ್ಭವತಿಯಾಗದಂತೆ ನಡೆದುಕೊಂಡಳು. ರತಿಕ್ರೀಡೆಯಿಂದ ದೂರ ಇರತೊಡಗಿದಳು" ಎಂದು ಬರ್ನಾರ್ಡ ಮಿತ್ರನ ಮಾತಿಗೆ ಸರಿಯಾದ ಉತ್ತರವನ್ನು ಹೇಳಿದ.

"ಅಯ್ಯೋ ಪಾಪ!"

"ಪಾಪವೇನು ಬಂತು? ಅವಳ ಬಗ್ಗೆ ನಿನಗೇಕೆ ಕರುಣೆ?"

"ಮತ್ತೇನಯ್ಯ? ಹನ್ನೊಂದು ವರುಷದ ದಾಂಪತ್ಯ ಜೀವನದಲ್ಲಿ ಏಳು ಮಂದಿ ಮಕ್ಕಳು ತೆರಪಿಲ್ಲದ ಗರ್ಭಧಾರಣ! ಇದೊಂದು ಯಾತನೆಯ ಜೀವನವಲ್ಲವೇ? ಇಂತಹ ಜೀವನದಲ್ಲಿ ಹೆಂಗಳೆಯರಿಗೆ ಯಾವ ಸುಖ ಇರುವುದು? ಜೀವನದ ಸೊಬಗು, ಆನಂದ, ಉತ್ಸಾಹವೆಲ್ಲವೂ ಮಕ್ಕಳನ್ನು ಹೆತ್ತು ಪಾಲಿಸುವುದರಲ್ಲಿಯೇ ಕಳೆಯಬೇಕೇ? ಇದೊಂದು ಬಗೆಯ ಸೆರೆಮನೆಯ ವಾಸವಲ್ಲವೆ? ಹೆಣ್ಣೆಂದರೇನು ಮಕ್ಕಳನ್ನು ಹೆತ್ತು ನೀಡುವ ಯಂತ್ರವೆಂದಹಾಗಾಯಿತು?"

"ಇದರಲ್ಲಿ ಯಾರೇನು ಮಾಡುವರು? ಇದು ವಿಧಿನಿಯಮ! ನಿಸರ್ಗದ ಆಟ, ರೋಜರ್"

"ಇರಲಿ ಬರ್ನಾರ್ಡರೇ ನಿಮ್ಮ ಈ ನಿಸರ್ಗವಾದ. ಈ ಬಗೆಯ ಸೋಗಿನ ಮಾತಿನಿಂದ ನೀವು ಯಾರನ್ನು ಮೋಸಗೊಳಿಸಲೆತ್ನಿಸುವಿರಿ? ದೈವದತ್ತ ರೂಪವನ್ನು, ನಿಸರ್ಗದತ್ತ ಯೌವ್ವನವನ್ನು ಸಂರಕ್ಷಿಸಿಕೊಂಡು ಹೋಗುವುದು ಮಾನವನ ಕರ್ತವ್ಯವಲ್ಲವೇನು? ಜಗತ್ತಿನಲ್ಲಿರುವ ಕವಿಗಳೇನು, ಕಲಾವಿದ

ರೇನು, ಸಂಗೀತ, ನೃತ್ಯ ಕಲೋಪಾಸಕರೇನು, ನಿಸರ್ಗದ ನಿಯಮದಂತೆ ಗಂಡು ಹೆಣ್ಣು ಸಮಾಗಮ ಹೊಂದುವಾಗ ಪರಸ್ಪರರಲ್ಲಿ ಆ ಆನಂದವನ್ನು ಹೊಂದಲು ಉರ್ವರು ಆತುರರಾಗಿರಬೇಕೆಂಬುದು ವಿಜ್ಞಾನ ಮತ್ತು ಮನ ಶ್ಶಾಸ್ತ್ರಗಳು ಒಪ್ಪುವವು. ಪಶು, ಪಕ್ಷಿ, ಮಾನವ, ಇವುಗಳಿಗೆ ಪಂಚೇಂದ್ರಿ ಗಳ ಸುಖವನ್ನು ಪಡೆಯುವ ಆಶೆ ನಿಸರ್ಗದತ್ತವಾದುದು. ಈ ಇಂದ್ರಿಯ ಗಳು ತಮಗೆ ಬೇಡಾದ ವಸ್ತುಗಳನ್ನು ಸ್ವೀಕರಿಸುವುದಿಲ್ಲ. ಆದರೆ ಮಾನ ವನು ತನ್ನ ಮುಂದಿರುವ ಹೆಣ್ಣು ಒಂದು ಸುಂದರ, ಆನಂದ, ಸೊಬಗಿನ ವಸ್ತುವೆಂದು ಭಾವಿಸಿ ಆದರ ಸೊಬಗು, ಚೆಲುವು ಅಳಿಯದಂತೆ ಕಾಪಾಡಿ ಕೊಂಡು ಬರಬೇಕೆಂಬ ಹಂಬಲ ಕಾಮುಕನಾದ ಪುರುಷನಿಗೇಕೆ ಇರುವುದಿಲ್ಲ ವೆಂಬ ಪ್ರಶ್ನೆ ನನಗೆ ಒಗಟಾಗಿಯೇ ಉಳಿದಿದೆ. ಇಂದ್ರಿಯಗಳ ಸೊಬಗನ್ನು ಕಾಯ್ದುಕೊಂಡು ಬರುತ್ತಿರುವ ಪುರುಷನು ತನ್ನ ಹೆಂಡತಿಯೆಂಬ ಚೆಲುವಿನ ಪದಾರ್ಥವನ್ನು ಕೇವಲ ಕಾಮವಾಸನೆಗೆ ಉಪಯೋಗಿಸಿ ಆ ಹೆಣ್ಣಿಗೂ ತನ್ನ ಸೌಂದರ್ಯ, ಆನಂದಗಳು ನಾಶವಾಗಬಾರದೆಂಬ ಆಶೆ ಇದೆಯೆಂಬುದನ್ನು ಮರೆಯಲಾಗದು. ಜಗತ್ತಿನ ನಿಯಮ ಗಂಡು ಹೆಣ್ಣಿಗೂ ಸಮವಾಗಿ ರುವುದು ನಿಸರ್ಗದ ಆದೇಶವಲ್ಲವೇ? ಹೆಣ್ಣು ಕೊಂಚ ಬೇಸರಪಟ್ಟುಕೊಂಡರೆ ಕೂಡಲೇ ಪುರುಷನು ಆ ಬೇಸರದ ದನಿಯಲ್ಲಿ ಮತ್ತಾವುದೋ ದೋಷವಿದೆ ಯೆಂದು ಊಹಿಸಿ ಅವಳ ಶೀಲವನ್ನೇ ಅನುಮಾನಿಸುವನು. ಹೀಗೆ ಸಂಶಯ ದಿಂದ ಇಡಿಗಾಳಿನಂತಹ ಬಾಳನ್ನೇ ಹೋಳಾಗಿಸಿ ಅತೃಪ್ತಿ, ಅಶಾಂತತೆ ತಲೆ ದೋರುವಂತೆ ಮಾಡುವನು. ಇದು ಯಾವ ಧರ್ಮ, ಇದು ಯಾವ ನಿಸರ್ಗದ ನಿಯಮ ?

"ಅಹುದು ಮಿತ್ರನೇ! ಆದರೆ........"

"ಆದರೆ, ಗೀದರೆ, ಅಲ್ಲಿ ನೋಡು ಬರ್ನಾಡ್. ಆ ಹೆಣ್ಣು ಇಲ್ಲಿ ನೆರೆದಿರುವ ಸುಂದರಿಯರಲ್ಲಿ ಅತ್ಯಂತ ಚೆಲುವೆಯಲ್ಲವೆ. ಸರ್ವರೂ ಅವಳ ಲಾವಣ್ಯವನ್ನು ಕಂಡು ಮೆಚ್ಚುವರಲ್ಲವೆ ? ನಾವು ನಮ್ಮ ಅಚ್ಚು ಮೆಚ್ಚಿನ ವಸ್ತುಗಳನ್ನು ಆದರದಿಂದ, ಮಾಸದಂತೆ ಪೋಷಿಸುವುದಿಲ್ಲವೇ ? ಇಂತಹ ಜಗತ್ತು ಮಾನ್ಯ ಮಾಡಿ, ನೋಡಿ ಆನಂದಿಸುವ ಆ ವಸ್ತು (ಹೆಣ್ಣಾಗಿದ್ದರೂ)

ಹೆಚ್ಚುಕಾಲ ಬಾಳಿ ನಮ್ಮ ಕಣ್ಮನಗಳನ್ನು ತಣಿಸಿದರೆ ಮಾನವ ಕುಲಕ್ಕೇ ಒಂದು ಶೋಭೆಯಲ್ಲವೆ? ಹೆಣ್ಣು ತನ್ನ ಮಕ್ಕಳಿಂದ ಬಂದ ಮನೆತನವನ್ನು ಬೆಳಗಬೇಕು. ನಿಜ ಆದರೆ ಅದಕ್ಕೆ ನಿಯಮ ಬೇಡವೇ?"

"ಮಿತ್ರಾ, ನೀನೇನು ಹೇಳುತ್ತಿರುವಿ. ಈ ನಿನ್ನ ತತ್ವವನ್ನು ಎಷ್ಟು ಮಂದಿ ಅರ್ಥಮಾಡಿಕೊಳ್ಳುವರು, ಹೇಳು. ಇದು ದೇವರ ಆಟವೆಂದು ನೈಮರೆಯುವರು".

"ನನ್ನನ್ನು ರೇಗಿಸಬೇಡ. ನನ್ನ ದೃಷ್ಟಿಯಲ್ಲಿ, ನಾನು ಅರ್ಥಮಾಡಿ ಕೊಂಡಂತೆ, ದೇವರೆಂಬುದು ಹೀಗೆ. ದೇವರ ವಿಷಯದಲ್ಲಿ ನನ್ನ ದೃಷ್ಟಿ ಹೀಗಿದೆ. ಆತನೊಬ್ಬ ಅಪೂರ್ವ ಶಕ್ತಿಮಂತನು; ಆತನ ಸೃಷ್ಟಿ ನಮಗೆ ಅಗೋಚರ ಅಗಮ್ಯ; ಮೀನು ತನ್ನ ತತ್ತಿಗಳನ್ನಿಡುವಂತೆ ಸಹಸ್ರಾರು ಲೆಕ್ಕ ವಿಲ್ಲದಷ್ಟು ಪ್ರಾಣಿಕೋಟಿಗಳನ್ನು ನಿರ್ಮಾಣಮಾಡುವನು. ಸೃಷ್ಟಿಸುವಾಗ ಆತನ ದೃಷ್ಟಿ ಇಹಲೋಕದ ಈಡು ಜೋಡು, ಪರಸ್ಪರ ಸಂಬಂಧ, ಇವು ಗಳ ಬಗ್ಗೆ ಯೋಚಿಸುವುದೇ ಇಲ್ಲ. ಆತನು ಸೃಷ್ಟಿಸಿದುದಕ್ಕಾಗಿ ನಾವು ಈ ಲೋಕದಲ್ಲಿ ಇಂತಹ ಇಜ್ಜೋಡಿನ ಬಾಳಿನಿಂದ ದುಃಖಿಸಬೇಕಾಗಿದೆ. ಇಷ್ಟಾದರೂ ಮಾನವನು ಇದು ದೈವ ಲೀಲೆಯೆಂದು ಕೈಕಟ್ಟಿಕೊಂಡು ಕುಳಿತು ಕೊಳ್ಳುವುದು ಪುರುಷಲಕ್ಷಣವಲ್ಲ. ಸುಶಿಕ್ಷಿತರು, ತಿಳಿದವರೆಂದು ನಾವು ಮಾನವ ಪ್ರಯತ್ನ ಮಾಡದಲೆ ಎಲ್ಲವೂ ದೇವರೇ ಮಾಡಬೇಕೆಂದು ಸುಮ್ಮನಿದ್ದರೇನು ಪ್ರಯೋಜನೆ"

ಬರ್ನಾರ್ಡನು ಇವನ ಆವೇಶಪರ ಮಾತುಗಳನ್ನು ಕೇಳುತ್ತ "ಹಾಗಾ ದರೆ ಮಾನವರು ಮಕ್ಕಳನ್ನು ಹೆರುವುದು, ಕೇವಲ ದೈವಲೀಲೆಯೆಂದು ಭಾವಿಸಿರುವರೆಂದು ನಿನ್ನ ಭಾವನೆಯೇ?" ಎಂದು ಕೇಳಿದನು. "ಅಹುದು ಇದು ನಿಸರ್ಗದ ಲೀಲೆ. ಪ್ರಕೃತಿಯಲ್ಲಿ ನಾವು ಕಾಣುವ ಸೃಷ್ಟಿ, ಲಯ, ಮುಂತಾದವುಗಳು ಹೇಗೆ ನಿಸರ್ಗದ ನಿಯಮದಂತೆ ನಡೆಯುವವೋ ಅದೇ ರೀತಿಯಲ್ಲಿಯೇ ಮಾನವ ಸೃಷ್ಟಿಯು ನಡೆದಿದೆ. ಮಾನವನಿಗೆ ಒಳ್ಳೆಯದು ಕೆಡುಕು, ಸುಖ, ದುಃಖ, ಮುಂತಾದವುಗಳ ಕಡೆ ಲಕ್ಷ್ಯವಿಟ್ಟು ವರ್ತಿಸುವ

ಸ್ವಾತಂತ್ರ್ಯವಿದ್ದರೆ, ನಿಸರ್ಗದಲ್ಲಿ, ಮಾನವ ಕುಲದಲ್ಲಿ ಈ ಭೇದ–ಭಾವಗಳು ಸುಖ–ದುಃಖಗಳು, ನೋವು–ತಾಪಗಳು, ಬಡವರು–ಶ್ರೀಮಂತರು, ಎಂಬ ವುಗಳು ಏಕೆ ಇರಬೇಕು? ದುಃಖಭೂಯಿಷ್ಟವಾದ ಈ ಜಗತ್ತು ನಮ್ಮಂಥ ವರು, ತಿಳುವಳಿಕೆಯ ಜನರು, ಜೀವಿಸಲು ನಿರ್ಮಿತವಾಗಿಲ್ಲ. ಆದರೆ ಈ ಜಗತ್ತಿನಲ್ಲಿ ನಮ್ಮ ನಾವೇ ರೂಪಿಸಿಕೊಳ್ಳಬಹುದಾಗಿತ್ತು. ಆದರೆ ಇಲ್ಲಿ ಮಾನವನು ಜನ್ಮತಾಳಿದ ಕೂಡಲೇ ಮಾಯೆಯೆಂಬುದು ನಮ್ಮ ಯೋಚನಾ ಲಹರಿಯನ್ನು ಮಂಕಾಗಿಸಿ, ನಮ್ಮನ್ನು ಧೃತಿಗೆಡಿಸಿ, ಈ ಪ್ರಪಂಚದಲ್ಲಿ ಸರ್ವ ಕಾಲದಲ್ಲಿಯೂ ದುಃಖವನ್ನು ಅನುಭವಿಸುವ ಅಪರಾಧಿಗಳಂತೆ ಇದ್ದೇವೆ.

"ಈ ಜಗತ್ತು ಹೇಗಿದೆ ನೋಡು. ಪ್ರಾಣಿಕೋಟಿಗಳು ಅಡವಿಗಳಲ್ಲಿ ಜೀವಿಸುವವು. ಆವುಗಳಿಗೆ ದೇವರು ಬುದ್ಧಿಯೆಂಬುದನ್ನು ಕೊಟ್ಟಿಲ್ಲ. ತಮ್ಮ ನಿತ್ಯಕರ್ಮಗಳನ್ನು ಯಂತ್ರಗಳಂತೆ ನಡೆಸುವವು. ಅಡವಿ, ಬಯಲು ಗಳಲ್ಲಿ ಜೀವಿಸುವವು. ಅವುಗಳಿಗೆ ಶಾಂತ ಸ್ವಭಾವದ ಜೀವನವನ್ನು ದೇವರು ನಿರ್ಮಿಸಲಿಲ್ಲ. ಜಂತುಗಳು ಜೀವಿಸಲು ತಮ್ಮ ನೆರೆಹೊರೆಯ ಜಂತು ಗಳನ್ನು ಕೊಂದಲ್ಲದೆ ಅವು ಜೀವಿಸಲಾರವು. ಆದರೆ ಮಾನವನ ರೀತಿಯೇ ಬೇರೆ. ನಮ್ಮಲ್ಲಿಯ ಆ ಪಶುವೃತ್ತಿಯನ್ನು ತೊರೆದು, ದಯೆ, ಕರುಣೆ ಯಿಂದ, ದೇವರು ಬುದ್ಧಿ, ಜ್ಞಾನಾದಿಗಳನ್ನಿತ್ತಿರುವನು. ಇದು ಮಾನವರಿಗೆ ಆತನ ಸಂದೇಶ. ಈ ನಾಟಕ ಗೃಹದಲ್ಲಿ ನಾವು ಇಲ್ಲಿ ನಾನಾ ಬಗೆಯ ಮಾನವರನ್ನು ಕಾಣುತ್ತಲಿದ್ದೇವೆ. ಗಂಡು ಹೆಣ್ಣನ್ನು ಕಂಡ ಕೂಡಲೇ ಕಾಮ ವ್ಯಾಮೋಹಗಳಿಂದ ಉದ್ರೇಕಗೊಳ್ಳುವನು. ಆದರೆ ಅದನ್ನು ನಿಯ ಮಿತ ಸ್ಥಳದಲ್ಲಿ ನಿಯಮಿತ ರೀತಿಯಲ್ಲಿ ಉಪಯೋಗಿಸಿ, ಬಾಳನ್ನು ಸುಗಮ ವಾಗಿ ಮಾಡಿಕೊಳ್ಳಬೇಕಾದುದು. ಜ್ಞಾನ, ಬುದ್ಧಿಗಳುಳ್ಳ ನಾವು ಜಂತು ಪ್ರಾಣಿಗಳಂತೆ ಬುದ್ಧಿಶೂನ್ಯರಾದರೆ ಹೇಗೆ? "ಆ ಹೆಣ್ಣು–ನಾವು ಯಾರನ್ನು ಕಂಡು ಇಲ್ಲಿಯ ವರೆಗೆ ಈ ಚರ್ಚೆಯನ್ನು ಮುಂದರಿಸಿದೆವೋ,—ಜಗತ್ತಿಗೆ ತನ್ನ ಲಾವಣ್ಯದಿಂದ, ದಿವ್ಯ ರೂಪಿನಿಂದ ಜಗತ್ತನ್ನು ಆನಂದಗೊಳಿಸಲು ದೇವರಿಂದ ಸೃಷ್ಟಿಸಲ್ಪಟ್ಟಿದ್ದಾಳೆ. ಆದರೆ ಇಂತಹ ಸುಂದರಿಯನ್ನು ಮನೆ ಯಲ್ಲಿ ಗಂಡನು ಹೇಗೆ ನಡೆಯಿಸಿಕೊಳ್ಳುತ್ತಿದ್ದಾನೆಯೆಂಬುದು ಯಾರಿಗಾ

ದರೂ ತಿಳಿದಿರುವುದೇ ? ಇರಲಿ ಅವಳನ್ನು ಏಳು ಮಕ್ಕಳನ್ನು ಹೆರುವಂತೆ ಮಾಡಿ, ಅವಳಲ್ಲಿ ಕಾರಣವಿಲ್ಲದ ತಪ್ಪನ್ನು ಕಂಡು, ಅವಳನ್ನು ತೊರೆದು ಕೆಲಸಕ್ಕೆ ಬಾರದ ನೀಚ ಸ್ತ್ರೀಯರ ಸಹವಾಸದಲ್ಲಿರುವ ಅವನ ವರ್ತನೆಯನ್ನು ಯಾರಿಗೆ ಸರಿಪಡಿಸಲು ಸಾಮರ್ಥ್ಯವಿದೆ? ಹೇಳು.

"ಅವಳ ಹತ್ತಿರ ಇದ್ದರೆ ಇನ್ನೂ ಹೆಚ್ಚು ಮಕ್ಕಳು ಜನಿಸುವರೆಂಬ ಭಯದಿಂದ ಅವನು ಇವಳಿಂದ ದೂರ ಇರಬಹುದು" ಎಂದು ಹೇಳುವ ಹೊತ್ತಿಗೆ ಎರಡನೆಯ ಅಂಕದ ನಂತರ ಹಾಕಿದ ತೆರೆ ಮೇಲಕ್ಕೇರಿತು. ನಾಟಕ ನೋಡುವ ಭರದಲ್ಲಿ ಚರ್ಚೆ ಅಲ್ಲಿಗೆ ನಿಂತಿತು.

೪

ನಾಟಕ ಮುಗಿದ ನಂತರ ಕೋಚಗಾಡಿಯಲ್ಲಿ ಮಾಸ್ಕಾರೇ ದಂಪತಿಗಳು ಇಬ್ಬರೂ ಮನೆಗೆ ಹಿಂತಿರುಗುತ್ತಿದ್ದರು. ಅವಳ ಗಂಡ "ಗೇಬ್ರೇಲ್" ಎಂಬ

"ನಿಮಗೇನು ಬೇಕು?"

"ಈ ನಮ್ಮ ಮೌನ ಆರಂಭವಾಗಿ ಇಲ್ಲಿಗೆ ಆರು ವರುಷಗಳಾದವು. ಇನ್ನೆಷ್ಟು ದಿನ ನನಗೆ ನೀನು ಈ ಬಗೆಯ ಶಿಕ್ಷೆ ವಿಧಿಸುವಿ?"

"ನನ್ನನ್ನೇನು ಮಾಡಬೇಕೆನ್ನುವಿರಿ?"

"ಆ ಮಕ್ಕಳಲ್ಲಿ ಯಾವದು ನನ್ನದಲ್ಲವೆಂಬುದನ್ನು ಇನ್ನಾದರೂ ಹೇಳು"

"ಅದನ್ನು ನಾನು ಜೀವಂತ ಇರುವ ವರೆಗೆ ಹೇಳುವದಿಲ್ಲ"

"ಪ್ರಿಯೆ, ನೀನು, ನನ್ನ ಮಾತುಗಳಲ್ಲಿ ವಿಶ್ವಾಸವಿಡು. ಈ ರಹಸ್ಯ ವನ್ನು ತಿಳಿದ ನಂತರ ನಾನು ಯಾರನ್ನೂ ಶಿಕ್ಷಿಸುವದಿಲ್ಲ. ಆ ಮಗುವಿಗೆ ಯಾವ ತೊಂದರೆಯನ್ನುಂಟುಮಾಡುವದಿಲ್ಲ. ಪ್ರಮಾಣಮಾಡಿ ಹೇಳುತ್ತೇನೆ"

"ಆ ರಹಸ್ಯವನ್ನು ತಿಳಿಸಲು ನಾನು ಸ್ವತಂತ್ರಳಲ್ಲ."

"ನನ್ನನ್ನು ಈ ಬಗೆಯ ವೇದನೆಯಲ್ಲಿ, ಸಂಶಯದ ಸಂದಿಗ್ಧದಲ್ಲಿ ಕೆಡವಿ ನನ್ನ ಜೀವನವನ್ನು ದುಃಖಮಯವನ್ನಾಗಿ ಮಾಡಬೇಡ. ಆ ಯೋಚನೆ

ನನ್ನ ತಲೆಯನ್ನು ಶೂಲದಂತೆ ಚುಚ್ಚಿ ನೋವನ್ನುಂಟುಮಾಡುತ್ತಿದೆ. ನನ್ನನ್ನು ಹುಚ್ಚೆಬ್ಬಿಸಿದೆ.

''ಆದರೆ ನೀವು ಈ ವಿಷಯವಾಗಿ ಬಹಳ ದಿನಗಳು ಚಿಂತಿಸಿ ಚಿಂತಿಸಿ, ಬಳಲಿರುವಿರಲ್ಲವೆ? ಇದರಿಂದ ನಿಮಗೆ ಅತೀವ ಯಾತನೆಯಾಗಿರುವದಲ್ಲವೆ?"

"ಅಹುದು ಪ್ರಿಯೆ, ಅಹುದು. ಈ ಸಮಸ್ಯೆ ಬಗೆಹರಿಯದ ಹೊರತು ನಾನು ಅವೆರಲ್ಲಿ ಪ್ರೀತಿ–ಮಮತೆಗಳನ್ನು ತೋರಲಾರೆ. ನೀಚವೃತ್ತಿಯಿಂದ ಜನಿಸಿದ ಆ ಮಗುವನ್ನು ನನ್ನ ಮಕ್ಕಳಲ್ಲಿರಗೊಡುವುದು ನನಗೆ ಹೆಚ್ಚಿನ ವ್ಯಥೆಯನ್ನುಂಟುಮಾಡಿದೆ''

''ಅಂದಲ್ಲಿ ನಿಮ್ಮ ಸಾಮಾನ್ಯ ಜೀವನಕ್ಕೆ ಹೊಸತಾದ ಈ ಬಗೆಯ ಮಾನಸಿಕ ಯಾತನೆಯನ್ನು ಅನುಭವಿಸುತ್ತಿರುವಿರಲ್ಲವೆ ?''

"ಆಗಲೇ ಹೇಳಿದೆನಲ್ಲ. ದಿನವೂ ನನ್ನ ತಲೆ ಈ ವಿಷಯ ನೆನೆದಂತೆಲ್ಲ ಕಾಯುತ್ತಿದೆ. ಈ ಆರು ವರುಷಗಳ ಅವಧಿಯಲ್ಲಿ ನಾನು ಆ ರಹಸ್ಯ ತಿಳಿಯಬಹುದೆಂದು ಕಾಯುತ್ತ ನಿಂತೆ. ನನ್ನ ಪ್ರಯತ್ನವೆಲ್ಲವೂ ವಿಫಲ ವಾಯಿತು. ಆ ಮಕ್ಕಳನ್ನು ನಾನು ಕಾಣುವಾಗ, ಎಲ್ಲರ ಬಗೆಗೂ ನನಗೆ ಅನುಮಾನವೆ. ಈ ಅನುಮಾನದ ಜೀವನ, ಈ ಅನಿಶ್ಚಿತ ಜೀವನ ನನಗೆ ತೀರ ಬೇಸರವೆನಿಸಿದೆ. ಮೊದಲಿಗೆ ನೀನು ಪವಿತ್ರ ಸ್ತ್ರೀಯೆಂದು, ನನ್ನ ಅಭಿರುಚಿಗಳಿಗೆ ಹೊಂದಿಕೊಂಡು ಹೋಗುವಿಯೆಂದು ನೆನೆದೆ. ಆದರೆ ನಿನ್ನ ರೀತಿಯೇ ಬೇರೆಯೆಂಬುದನ್ನು ತಿಳಿದ ಮೇಲೆ ನಿನ್ನೊಂದಿಗೆ ಜೀವಿಸುವುದು ಅಸಹ್ಯವೆನಿಸಿತು. ಅಂದೇ ನಿನ್ನನ್ನು ಕೊಂದು ಬಿಡುತ್ತಿದ್ದೆ. ಆದರೆ ಈ ಏಳು ಮಕ್ಕಳಲ್ಲಿ ಯಾರು ನನಗೆ ಜನಿಸಿಲ್ಲವೆಂಬ ರಹಸ್ಯ ತಿಳಿಯದ ಹೊರತು, ನಾನು ಮುಂದರಿಯುವುದು ಕಷ್ಟವೆನಿಸಿ, ಈ ಆರು ವರುಷಗಳವರೆಗೆ ಅಜ್ಞಾತವಾಸವನ್ನು ಅನುಭವಿಸಿರುವೆನು. ನಿನ್ನನ್ನು ಯಾವ ರೀತಿಯಲ್ಲಿಯೂ ಹಿಂಸಿಸುವುದಿಲ್ಲವೆಂದು ಮಾತು ಕೊಡುವೆನು. ನಿಜಾಂಶವನ್ನು ತಿಳಿಸು."

ಇವೆಲ್ಲ ಮಾತುಗಳು ಗಾಡಿಯಲ್ಲೇ ನಡೆದುವು. ಹೊರಗೆ ಕತ್ತಲು ಕವಿದಿದ್ದರೂ, ಅವಳು ಪಶ್ಚಾತ್ತಾಪದಿಂದ ದುಃಖಿಸುತ್ತಿರುವಳೆಂದು ಅವನಿಗೆನಿ

ಸಿತು. "ಪ್ರಿಯೆ, ಹೇಳಿಬಿಡು. ನನ್ನನ್ನು ಯೋಚನೆಗೆ ಈಡುಮಾಡಬೇಡ." ಎಂಬ ಮಾತುಗಳಿಗೆ ಅವಳು ಪಶ್ಚಾತ್ತಾಪದ ಸ್ವರದಲ್ಲಿ "ಸ್ವಾಮೀ! ನಿಮ್ಮ ಮುಂದೆ, ದೇವರ ಸಮ್ಮುಖದಲ್ಲಿ, ನಾನು ಅನುಭವಿಸುತ್ತಿದ್ದ ಆ ಹೆರಿಗೆಯ ದುಃಖದಿಂದ ದೂರಿರುವ ಆಶೆಯಿಂದ, ಆ ಯಾತನೆಯನ್ನು ತಪ್ಪಿಸಿಕೊಳ್ಳುವ ಉದ್ದೇಶದಿಂದ ನಾನು ಅಂದು ಸುಳ್ಳು ಹೇಳಿದೆ. ಮಕ್ಕಳ ತಲೆಯ ಮೇಲೆ ಕೈ ಇಟ್ಟು ಅಂದು ಊಟಕ್ಕೆ ಕುಳಿತಾಗ ಸುಳ್ಳು ಹೇಳಲು ಪ್ರೇರೇಪಿಸಿದುದೂ ಅದೇ ಭಾವನೆಯೇ. ಹೇಗಾದರೂ ಮಾಡಿ ನಿಮ್ಮ ಸಹವಾಸದಿಂದ ಆಗುವ ಮಕ್ಕಳನ್ನು ಹೇರುವ ಪ್ರಸಂಗವನ್ನು ತಪ್ಪಿಸಿಕೊಂಡು ಕೆಲಕಾಲ ಆ ವೇದನೆ ಯಿಂದ ದೂರಿರುವ ಬಯಕೆಯೇ ನನ್ನನ್ನು ಹಾಗೆ ಸುಳ್ಳುಹೇಳಲು ಪ್ರೇರೇಪಿ ಸಿದ್ದು." ಎಂದಳು.

ಅವನ ಸಹನಶಕ್ತಿಯು ಮೇರೆ ಮೀರಿತ್ತು. "ಪ್ರಿಯೆ, ನಿನ್ನ ಮಾತು ಗಳಲ್ಲಿ ಯಾವುದು ನಿಜ, ಯಾವುದು ಸುಳ್ಳುಯೆಂಬುದನ್ನು ನಾನು ನಿಶ್ಚಯಿಸ ಲಾರೆ. ನೀನು ಈಗ ಹೇಳಿದ ಮಾತುಗಳು ನನ್ನನ್ನು ಇನ್ನಿಷ್ಟು ಗೊಂದಲದಲ್ಲಿ ಕೆಡವಿವೆ. ಹೀಗೇಕೆ ಮಾಡಿದೆ ಪ್ರಿಯೆ'' ಎಂದು ಅವನು ಹುಚ್ಚನಂತೆ ಚೀರಿದ.

ಆ ವೇಳೆಗೆ ಗಾಡಿಯು ಅವರ ಮನೆಯ ಅಂಗಳವನ್ನು ಸಮೀಪಿಸಿತ್ತು. ಗಾಡಿಯಿಂದಿಳಿದು ಇಬ್ಬರೂ ಮನೆಯೊಳಗೆ ಪ್ರವೇಶಿಸುವಾಗ "ಪ್ರಿಯೆ ನಿನ್ನೊಂದಿಗೆ ಇನ್ನೂ ಕೊಂಚ ಮಾತನಾಡಬೇಕೆಂದೆನಿಸಿದೆ'' ಎಂದ ಮಾತಿಗೆ ಅವಳು ಆಗಬಹುದೆಂದು ಸಮ್ಮತಿಸಿದಳು. ಇಬ್ಬರೂ ಕಿರುಮನೆಯನ್ನು ಪ್ರವೇಶಿಸಿದಾಗ ಅಲ್ಲಿದ್ದ ಆಳು ಮೇಣದ ಬತ್ತಿಗಳನ್ನು ಹೊತ್ತಿಸಿ ಹೊರಟು ಹೋದನಂತರ "ಪ್ರಿಯೆ, ನಿಜಾಂಶವನ್ನು ತಿಳಿಯಲಾರದಷ್ಟು ಮಂಕನಾಗಿ ದ್ದೇನೆ ನಾನು. ನಾನೆಷ್ಟು ಸಲ ನಿನ್ನನ್ನು ಕೇಳಿಕೊಂಡೆ. ಆರು ವರುಷಗಳ ಅವಧಿಯಲ್ಲಿ ನಾನು ನಿನ್ನನ್ನು ಕೇಳಿದಾಗಲೆಲ್ಲ ಸುಮ್ಮನಿದ್ದುಬಿಟ್ಟೆ. ಆರು ವರುಷಗಳ ವರೆಗೆ ನೀನು ನನ್ನನ್ನು ಕಾಡಿದೆ. ಅನ್ಯಪುರುಷನ ಸಂಪರ್ಕವಿಟ್ಟು ಕೊಂಡವಳೆಂದು ಸಂಶಯಪಟ್ಟೆ. ಆದರೆ ಇಂದು ಒಂದೇ ಮಾತಿನಲ್ಲಿ ಅದೆ ಲ್ಲವೂ ಸುಳ್ಳೆಂದು ಹೇಳುತ್ತಿರುವೆ. ಈಗಲೂ ನೀನು ನಿಜವನ್ನು ಹೇಳುತ್ತಿಲ್ಲ

ವೆಂಬೇ ನನ್ನ ತರ್ಕ. ನನ್ನ ಈ ಮನೋವೇದನೆಯನ್ನು ಪರಿಹರಿಸಲೆಂದು ಈಗಲೂ ಸುಳ್ಳಾಡಿರಬಹುದು." ಎಂದ.

"ಆಗ ಸುಳ್ಳಾಡದಿದ್ದರೆ ಈ ಹೊತ್ತಿಗೆ ಮತ್ತು ನಾಲ್ಕು ಮಕ್ಕಳ ತಾಯಿಯಾಗುತ್ತಿದ್ದೆ."

"ತಾಯಿಯಾದ ನೀನು ಹೀಗೆ ಮಾತನಾಡಬಹುದೇ?''

"ದೈವವೇ! ಅಯ್ಯೋ! ಈಗಿರುವ ನನ್ನ ಮಕ್ಕಳನ್ನು ಸುಖವಾಗಿ ಲಾಲಿಸಿ ಪಾಲನೆ ಮಾಡುವ ಆಶೆ ನನ್ನದು. ನನ್ನ ತಾಯಮಮತೆ ಅದನ್ನು ಬಯಸುತ್ತಿದೆ. ಆದರೆ ಮುಂದಾಗುವ ಮಕ್ಕಳ ಉಪೇಕ್ಷೆ, ಆರೈಕೆಯ ಪ್ರಶ್ನೆಯಲ್ಲಿ ನನಗೆ ಆಶೆಯಿಲ್ಲ. ಸ್ವಾಮಿ ನಾವು ಹೆಣ್ಣಾಗಿ ಜನಿಸಿದವರು. ಈ ನವಜಗತ್ತಿನಲ್ಲಿ ಕೇವಲ ಮಕ್ಕಳನ್ನು ಲೋಕಕ್ಕೆ ಒದಗಿಸುವ ಯಂತ್ರಗಳೆಂಸು ನಮ್ಮ ನಂಬಿಕೆಯಲ್ಲ" ಎಂದು ಏಳುವುದರಲ್ಲಿದ್ದಳು.

ಅವನು ಮತ್ತೆ ಅವಳ ಕೈಯನ್ನು ಹಿಡಿದು ನಿಲ್ಲಿಸಿ, "ಈಗಲಾದರೂ ನಿಜವನ್ನು ಹೇಳು" ಎಂದ ಮಾತಿಗೆ "ಪ್ರಿಯಸ್ವಾಮೀ! ನಾನು ನಿಮ್ಮ ಮನೆತನಕ್ಕೆ ಕಳಂಕವನ್ನುಂಟುಮಾಡುವ ನೀಚ ಹಾದರದ ಕೆಲಸವನ್ನು ಮಾಡಿಲ್ಲವೆಂದು ಪ್ರಮಾಣಮಾಡಿಹೇಳುವೆನು. ಅಂದು ನಾನು ಸುಳ್ಳಾಡಿದುದು ನಿಮ್ಮ ಆ ಪಶುವೃತ್ತಿಯನ್ನು ತಡೆಯಲೆಂದು. ನಿಮ್ಮ ತಪ್ಪು ನಿಮಗೆ ತಿಳಿಯುತ್ತಿಲ್ಲ. ನಾನೇನು ಮಾಡಲಿ?'' ಎಂದಳು.

ಅವನು ತನ್ನ ಹೆಂಡತಿಯ ಸುಂದರ ಮುಖವನ್ನು ದಿಟ್ಟಿಸಿ ನೋಡಿದ. ತಲೆಯನ್ನಲಂಕರಿಸಿದ ಚೂಡಾಭರಣದಲ್ಲಿಯ ಆ ದಿವ್ಯ ವಜ್ರದ ಹೊಳಪು ಅವಳ ಚೆಲುವನ್ನು ಹೆಚ್ಚಿಸಿತು. ಇವಳೋರ್ವ ದಿವ್ಯ ಸುಂದರ ವಸ್ತುವೆಂಬ ಭಾವನೆ ಅವನಲ್ಲಿ ಉದಯಿಸಿತು. ಸ್ತ್ರೀ ಜನಾಂಗಕ್ಕೆ ಇಂತಹ ಲಾವಣ್ಯದಿಂದ, ತಿಲಕಪ್ರಾಯಳಾಗಿ, ಮಿನುಗಿ, ದೇವನ ಸೃಷ್ಟಿಯಲ್ಲಿ ಇವಳೊಂದು ಅತ್ಯಂತ ಪ್ರದರ್ಶನಾರ್ಹವಾದ ಸ್ತ್ರೀಯೆಂಬ ಭಾವನೆ ಅವನಲ್ಲಿ ಕ್ರಮೇಣ ಉಂಟಾಯಿತು. ತನ್ನ ಕಾಮದಾಹಕ್ಕೆ ಜನ್ಮತಾಳಿದ ಸಾಮಾನ್ಯ ಸ್ತ್ರೀಯಲ್ಲವೆಂಬ ಶ್ರೇಷ್ಠವಾದ ಕಲ್ಪನೆ ಅವನಿಗುಂಟಾಯಿತು. ಅವನು ಮುಚ್ಚಿದ ಕಣ್ಣು

ಈಗ ತೆರೆಯಿತು. "ಪ್ರಿಯೆ, ಇಂದು ನಿನ್ನ ಮುಖದಲ್ಲಿ ಒಂದು ದಿವ್ಯ ನಿರ್ಮಲ ವಾದ ಚೆಲುವನ್ನು ಕಾಣುತ್ತಲಿದ್ದೇನೆ. ನಿನ್ನ ನಿರ್ಮಲ, ಕೋಮಲ ಹೆಣ್ಣಿನ ಹೃದಯವನ್ನು ಅರಿಯಲು, ನನಗೆ ಇಷ್ಟು ದಿನ ಬೇಕಾಯಿತು. ಈಗ ನಿನ್ನ ಮಾತುಗಳಲ್ಲಿ ನನಗೆ ನಂಬಿಕೆಯುಂಟಾಗುತ್ತದೆ" ಎಂದು ತನ್ನ ಮನೋ ನಿಶ್ಚಯವನ್ನು ಹೇಳಿದಾಗ ಅವಳು ತನ್ನ ಕೋಮಲ ಕೈ ಬೆರಳನ್ನು ಅವನಿಗೆ ಮುದ್ದಿಸಲು ಚಾಚುತ್ತ "ಹಾಗಾದರೆ ನಾವಿಬ್ಬರೂ ಇಂದಿನಿಂದ ಮತ್ತೆ ಪ್ರೇಮ ಹೃದಯಿಗಳಾದೆವಲ್ಲವೇ?" ಎಂದು ಕೇಳಿದಳು. "ಅಲ್ಲದೆ ಮತ್ತೇನು ಪ್ರಿಯೆ. ಗೇಬ್ರಿಲ್ ಖಂಡಿತವಾಗಿಯೂ. ಇಂದಿನಿಂದ ನಮ್ಮಿಬ್ಬರಲ್ಲಿ ಹೊಸ, ನೂತನ ಯುಗದ ರಕ್ತ ಹರಿಯುತ್ತದೆ. ಹಳೆಯದನ್ನು ಮರೆ. ನಾವು "ಜಗದ ತಂದೆತಾಯಿಗಳಾಗಿ ಬಾಳೋಣ" ಎಂದು ಅವಳ ಚಾಚಿದ ಕೈ ಬೆರುಳುಗಳನ್ನು ಮಮತೆಯಿಂದ ಮುದ್ದಿಸಿದ. ಅವಳ ಲಾವಣ್ಯಮಯಿ ಮುಖವನ್ನೇ ಎವೆಯಿಕ್ಕದೆ ನೋಡುತ್ತ ತನ್ನ ಕೋಣೆಗೆ ಹೊರಟು ಹೋದ.

—Useless Beauty



# ತಂದೆ–ಮಗ

ಅದು ವಸಂತಕಾಲದ ಒಂದು ರಮಣೀಯ ಸಂಜೆ. ಓರ್ವ ಸೇನೇಟ ರನು ಮತ್ತು ಕಲಾಸಂಸ್ಥೆಯ ಸದಸ್ಯನು ಈ ಈರ್ವರೂ ಅನುಭವಜ್ಞರು ಅಂದು ಸಂಜೆ ತಿರುಗಾಡಲಿಕ್ಕೆ ಹೊರಟಿದ್ದರು. ಅವರಿಗೆ ವಯಸ್ಸಾಗಿತ್ತು. ಮೆಲ್ಲಗೆ ಹೆಜ್ಜೆಗಳನ್ನಿಡುತ್ತ ಅವರ ಹರಟೆ ನಾನಾಬಗೆಯ ವಿಷಯಗಳತ್ತ ಹೊರಳಿದಾಗ ವಸಂತಕಾಲದಲ್ಲಿ ತಾನೇತಾನಾಗಿ ಬೆಳೆದುನಿಂತ ಮೂಲಂಗಿ ಎಲೆಗಳ ಸುವಾಸನೆ ಇವರನ್ನು ಆಕರ್ಷಿಸಿತು. ದೂರದಲ್ಲಿ ಚೆಂದವಾಗಿ ಬೆಳೆದು ನಿಂತ ಕರೀಮರದ ಸೊಬಗನ್ನು ಕಂಡು ಸೇನೇಟರನು ಹರುಷ ಗೊಂಡು ಆ ಗಿಡವು ತನ್ನ ಸ್ವಸಾಮರ್ಥ್ಯದಿಂದ ಎಷ್ಟೊಂದು ಅದೇ ಬಗೆಯ ಗಿಡಗಳು ಹೊಸತಾಗಿ ಜನ್ಮತಾಳಲು ಕಾರಣವಾಯಿತೋಯೆಂದು ಯೋಚಿ ಸಿದ. ಇದರಂತೆ ಮಾನವರು ತಮ್ಮ ಜೀವನದಲ್ಲಿ ಎಷ್ಟೊಂದು ಸ್ತ್ರೀಯ ರೊಂದಿಗೆ ಸಂಪರ್ಕವನ್ನು ಬೆಳೆಸಿದಾಗ ಮಾನವರು ಜನನವಾಗಲು ಕಾರಣ ವಾದರೋಯೆಂಬ ವಿಷಯ ಅವನಿಗೆ ಅನಾಯಾಸವಾಗಿ ನೆನಪಾಯಿತು. ತನ್ನ ಕಲಾವಿದ ಮಿತ್ರನನ್ನುದ್ದೇಶಿಸಿ ಈ ವಿಷಯವನ್ನು ಪ್ರಸ್ತಾಪಿಸಿದಾಗ ಆವನು "ಅಹುದು ಮಿತ್ರ ನೀನು ಹೇಳುವ ಮಾತು ನಿಜವೇ. ನಿನ್ನ ಈ ಯೋಚನೆ ಸರಿಯಾದುದೇ" ಎಂದ.

"ಆದರೂ ನಾವು ನಮ್ಮ ತಪ್ಪನ್ನು ತಿಳಿಯದೆ, ನಮ್ಮ ಕಾಮುಕ ವ್ಯಾಮೋಹಕ್ಕೆ ಅನೇಕ ಅಬಲೆಯರನ್ನು ತುತ್ತಾಗುವಂತೆ ವರ್ತಿಸಿ ಮರು ಕ್ಷಣವೇ ಅವರನ್ನು ಮರೆಯುವೆವು. ಇಂಥ ಪುರುಷವೃಂದಕ್ಕೇನೆನ್ನಬೇಕು? ನಾವು ಹೀಗೆ ವರ್ತಿಸುವುದು ಅಪರಾಧವಲ್ಲವೇ?" ಎಂದ ಸೇನೇಟರನು.

"ನಿಜ ಮಿತ್ರನೇ, ನಿಜ. ಈ ಬಗೆಯ ವ್ಯಾಪಾರದಲ್ಲಿರುವ ಹೆಂಗಳೆ ಯರು ತಮ್ಮ ಜೀವನದಲ್ಲಿ ಒಂದಿಲ್ಲ ಎರಡು ಮಕ್ಕಳ ತಾಯಿಗಳಾದಾಗ ಅವರ ಜನ್ಮಕ್ಕೆ ಕಾರಣರಾದ ತಂದೆಯಾರೆಂಬುವುದು ಹೇಳಲು ಅವರಿಗೆ ಆಗು

ವದಿಲ್ಲ. ಇಂತಹ ನೀಚ ಕೃತ್ಯಗಳನ್ನು ಮಾಡುವ ಪುರುಷರೆನಿಸಿಕೊಂಡ ನಾವು ನಮ್ಮ ತಪ್ಪುಗಳಿಗೆ ಒಂದು ಸಲವಾದರೂ ಪಶ್ಚಾತ್ತಾಪ ವ್ಯಕ್ತ ಮಾಡದೇ ಇರುವುದು ತಪ್ಪೆಂದು ನಾನೂ ಒಪ್ಪಿಕೊಳ್ಳುವೆ. ಉತ್ತಮ ವರ್ಗದಲ್ಲಿ ಜೀವಿಸಲು ಸ್ಥಾನವಿಲ್ಲದೆ ಈ ನಮ್ಮ ದೇಶದಲ್ಲಿ ತುಂಟರೂ, ಪುಂಡರೂ, ದಾರಿಹೋಕರೂ, ಕೊಲೆಗಡುಕರೂ ಮುಂತಾದವರು ತಂದೆತಾಯಿಗಳಾರೆಂಬದನ್ನು ಅರಿಯದೆ ಸರಕಾರದ ಅನಾಥಾಲಯಗಳಲ್ಲಿ ಬೆಳೆದು ಜೀವನದ ಮಹತ್ವವನ್ನೇ ತಿಳಿಯದೆ ನೀಚ ಜೀವನವನ್ನು ನಡೆಸಿ ದೇಶಕ್ಕೆ ಕ್ಷೋಭೆಯನ್ನುಂಟು ಮಾಡುತ್ತಿರುವ ಈ ಜನಾಂಗದ ನಿರ್ಮಾಣಕ್ಕೆ ನಾವೇ ಕಾರಣರೆಂಬುದನ್ನು ಒಪ್ಪಿಕೊಳ್ಳುವೆ.

"ನನ್ನ ಜೀವನದಲ್ಲಿ ನಡೆದುಹೋಗಿರುವ ಇಂತಹ ಒಂದು ಚಿಕ್ಕ ಪ್ರಕರಣವು ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ. ಬೀದಿಗಳಲ್ಲಿ ಅನಾಥ ಬಾಲಕರನ್ನು ಕಂಡರಾಗಲಿ, ಬಿಕ್ಷುಕ ಮತ್ತು ಬಡವರನ್ನು ಕಂಡರಾಗಲಿ ನನ್ನ ಇಪ್ಪತ್ತೈದನೆಯ ವಯಸ್ಸಿನಲ್ಲಿ ಆಗಿ ಹೋದ ಸನ್ನಿವೇಶ ಸರ್ವದಾ ನೆನಪಾಗುತ್ತಿದೆ. ಅದನ್ನು ನಿನ್ನ ಮುಂದೆ ವಿವರಿಸುವೆ; ಕೇಳು.

ನಾನು ಇಪ್ಪತ್ತೈದು ವರ್ಷದವನಿದ್ದಾಗ ಕಾಲ್ನಡೆಗೆಯಲ್ಲಿ ನನ್ನ ಮಿತ್ರನೊಂದಿಗೆ (ಈಗ ಅವನು ಶಾಸನಸಭೆಯ ಸದಸ್ಯನಾಗಿರುವನು.) ಬ್ರಿಟನೀ ಪ್ರಾಂತವನ್ನೆಲ್ಲ ಸುತ್ತಿಬರಬೇಕೆಂಬ ನಿರ್ಧಾರದಿಂದ ಹೊರಟೆವು. ಹತ್ತು ಹದಿನೈದು ದಿನಗಳ ವರೆಗೆ ಉತ್ತರದಲ್ಲಿ ಸಮುದ್ರತೀರವನ್ನು ಮತ್ತು ಫಿನೀಸೇ ಪ್ರಾಂತವನ್ನು ಸುತ್ತಿಬಂದು ಡೋರ್ನ್ಲೇ ಹತ್ತಿರ ಇರುವ ಟ್ರೆಪಾಸ್ಮೆ ಕೊಲ್ಲಿಗೆ ಬಂದು ಅಲ್ಲಿಯ ಒಂದು ಹಳ್ಳಿಯಲ್ಲಿ (ಹೆಸರು ನೆನಪಿಲ್ಲ) ವಿಶ್ರಾಂತಿ ಪಡೆದೆವು. ಬೆಳಗಿನಲ್ಲಿ ನನ್ನ ಸಂಗಡಿಗನು ಬಹಳ ದಣಿದಿದ್ದುದರಿಂದ ಅವನನ್ನು ಬಲವಂತ ಪಡಿಸಿ ಸಂಜೆಯ ಸಮಯಕ್ಕೆ ಆಡೇನಿಗೆ ಬಂದು ಮಾರನೆಯ ದಿನ ಪಾನ್ ಲಾಬೇಯಲ್ಲಿ ತಂಗಿದೆವು. ಅಲ್ಲಿ ನಮಗೆ ಇಳಿದುಕೊಳ್ಳಲು ಒಂದು ವ್ಯವಸ್ಥಿತವಾದ ಹೋಟೆಲ್ ದೊರೆಯಿತು. ಅಲ್ಲಿರುವಾಗ ನನ್ನ ಮಿತ್ರರಿಗೆ ಹೆಚ್ಚು ಜ್ವರ ಬರಲು ಕೆಲವು ದಿನಗಳವರೆಗೆ ಅಲ್ಲಿಯೇ ನಿಲ್ಲಬೇಕಾಯಿತು. ಈ ಹಳ್ಳಿಯು ಒಂದು ಸುಂದರ ಪ್ರದೇಶದಲ್ಲಿ ನಿರ್ಮಿತವಾಗಿದೆ. ಪ್ರತಿವರು

ಷವೂ ನಾನು ತಪ್ಪದೆ ಇಲ್ಲಿಗೆ ಒಂದು ಸಲವಾದರೂ ಬಂದುಹೋಗುವ ರೂಢಿಯನ್ನಿಟ್ಟುಕೊಂಡಿದ್ದೇನೆ.

ಇಲ್ಲಿಯ ಜನರು ಒಂದು ಬಗೆಯ ಹಳ್ಳಿಯ ಸರಸ ಜೀವನಕ್ಕೆ ಮನಸೋತಿರುವರು. ಚೆಲುವಿನಿಂದ ತುಂಬಿತುಳುಕುವ ಇವರ ಈ ಹಳ್ಳಿಯ ಹೆಂಗಳೆಯರು ಧೃಢಕಾಯರು, ಆರೋಗ್ಯವಂತರಾಗಿದ್ದು, ನೀತಿವಂತರೆಂದು ನಾನು ಸಾರಿಹೇಳಬಲ್ಲೆ. ಅವರು ತೀರ ಮುಗ್ಧರು. ನಿಸರ್ಗದ ಬಯಲಲ್ಲಿ ಆವೇತಾವಾಗಿ ಜೀವಿಸುವ ಇವರನ್ನು ನಗರದ ನಾಗರಿಕತೆ ಹಾಳು ಮಾಡಿರಲಿಲ್ಲ.

ನಮ್ಮ ಹೋಟಲಿನಲ್ಲಿ ನಾವಿಳಿದುಕೊಂಡ ಕೋಣೆಯು ಚೆನ್ನಾಗಿತ್ತು. ನಮ್ಮ ಆರೈಕೆಗೆಂದು ಓರ್ವ ನವತರುಣಿಯನ್ನು ಒಡೆಯನು ನೇಮಿಸಿದ್ದನು. ಅವಳು ಮುಗ್ಧೆ. ಚೆಲುವಾದ ಹಲ್ಲುಗಳೇ ಅವಳ ಮುಖಕ್ಕೆ ಕಳೆ ತಂದು ಕೊಟ್ಟಿದ್ದವು. ಮೇಲೆ ತಿಳಿ ನೀಲಿ ಬಣ್ಣದ, ಹೊಳೆಯುವ ಕಣ್ಣುಗಳು ಪ್ರವಾಸಿಕರನ್ನು ಬೆರಗುಗೊಳಿಸುತ್ತಿದ್ದವು. ಅವಳಿಗೆ ಫ್ರೆಂಚಭಾಷೆ ಒಂದಕ್ಷರ ಬರುತ್ತಿರಲಿಲ್ಲ. ಅವಳಾಡುವ ಮಿಶ್ರ ಬ್ರಿಟನ್ ಪಾಟಾಯಿ ಭಾಷೆ ನಮಗೆ ಕೊಂಚ ತಿಳಿಯುತ್ತಿತ್ತು. ನನ್ನ ಮಿತ್ರನ ಬೇನೆ ಬೇಗ ಗುಣಮುಖವಾಗುವ ಲಕ್ಷಣ ಕಂಡುಬರಲಿಲ್ಲ. ದಿನವೆಲ್ಲವೂ ಅವನ ಬಳಿಯಲ್ಲಿಯೇ ಇದ್ದು ರಾತ್ರಿಗೆ ನನ್ನ ಕೋಣೆಗೆ ಬರುತ್ತಿದ್ದೆ. ಆದರೆ ಆ ಕನ್ಯೆಯನ್ನು ಕಂಡಾಗಲೆಲ್ಲ ಅವಳನು ಮಾತನಾಡಿಸುತ್ತಿದ್ದೆ. ಕೇವಲ ಮೂಕಸನ್ನೆಯಿಂದಲೇ ನನ್ನ ಭಾಷೆ ಅವಳಿಗೆ ತಿಳಿಯುತ್ತಿತ್ತು.

ಒಂದು ರಾತ್ರಿ ಬಹಳ ಹೊತ್ತು ಕಳೆದ ಮೇಲೆ ನನ್ನ ಮಿತ್ರನು ಮಲಗಿದ ನಂತರ ನನ್ನ ಕೋಣೆಗೆ ಬರುತ್ತಲಿದ್ದೆ. ಆಗ ಆ ಕನ್ಯೆಯು ಕೆಲಸವನ್ನು ಮುಗಿಯಿಸಿಗೊಂಡು ನನ್ನ ಕೋಣೆಯ ಎದುರಿನಲ್ಲಿದ್ದ ತನ್ನ ಕೋಣೆಗೆ ಹೋಗುವುದರಲ್ಲಿದ್ದಳು. ನಿಮಿಷ ಮಾತ್ರದಲ್ಲಿಯೇ ಕೇವಲ ಕುಚೇಷ್ಟೆಗೆಂದು ನಾನು ಅವಳ ಕೈ ಹಿಡಿದು ಹತ್ತಿರಕ್ಕೆ ಎಳಕೊಂಡು ಟೊಂಕಕ್ಕೆ ಕೈ ಚಾಚಿದೆ. ನನ್ನ ಕೋಣೆಗೆ ಕರೆದೊಯ್ದು ಬಾಗಿಲವನ್ನು ಭದ್ರಪಡಿಸಿದೆ. ನನ್ನ ವರ್ತನೆ ಅವ

ಳಿಗೆ ಆಶ್ಚರ್ಯವೆನಿಸಿತು. ಓರ್ವ ಬಡ ಕನ್ಯೆಯನ್ನು ನನ್ನಂತಹ ಮಧ್ಯಮ ವರ್ಗದವನು ಹತ್ತಿರ ಕರೆಯುವದು ಅವಳಿಗೆ ತೀರ ಹೊಸತೆನಿಸಿತು. ಅವಳ ಆ ಮುಗ್ಧನೋಟ, ನನ್ನ ಹಿಡಿತದಲ್ಲಿ ಸಿಕ್ಕು, ರತಿ ಕ್ರೀಡೆಗೆ ನಿರ್ಬಂಧಿಸಿದ ರೀತಿ, ಕೆಡಿಸ ಬೇಡೆಂದು ಬೇಡಿಕೊಂಡ ಬಗೆ, ಇವುಗಳೆಲ್ಲವೂ ಅವಳು ನಿರ್ಮಲಳೆಂದು, ನೀತಿವಂತಳೆಂದು ನನಗೆ ತಿಳಿಯಿತು. ಗಂಟೆಯ ವರೆಗೆ ನಾನು ಅವಳೊಂದಿಗೆ ಹೆಣಗಿದೆ. ಕಡೆಗೆ ಅವಳು ನಿರ್ವಾಹವಿಲ್ಲದೆ ಬಲು ಬೇಸರದ ನೋಟದಿಂದ ನನ್ನ ವಶವಾದಳು. ಹೊರಗಿನ, ಅಕ್ಕಪಕ್ಕದ ಕೋಣೆಯವರಿಗೆ ಇಲ್ಲಿ ನಡೆಯುವ ಈ ರಂಭಾಟ ತಿಳಿದು, ಮರುದಿನ ತನ್ನ ಮಾನವೆಲ್ಲಿ ಹೋಗಿ ಕೆಲಸಕ್ಕೆ ಕಲ್ಲು ಬೀಳುವುದೋ ಎಂಬ ಆ ತರುಣಿ ನನ್ನ ವಶವಾದಂತೆ ಕಂಡುಬಂತು. ಅವಳು ಇಂತಹ ಹೋಟಲುಗಳಲ್ಲಿ ಒಡೆಯರು ಪ್ರವಾಸಿಕರನ್ನು ಸಂತೃಪ್ತಿಗೊಳಿಸಲು ಇಟ್ಟುಕೊಂಡ ಜಾರಿಣಿವೃತ್ತಿಯ ಹೆಂಗಳೆಯರ ಜಾತಿ ಇವಳದಾಗಿರಲಿಲ್ಲ.

ನನ್ನ ಕೆಲಸ ಮುಗಿದಕೂಡಲೇ ಅವಳು ನಾಚಿಕೆಯಿಂದ ಬಾಗಿಲು ತೆರೆದು ತನ್ನ ಕೋಣೆಗೆ ಮರು ಮಾತನಾಡದೇ ಓಡಿಹೋದಳು. ಅನಂತರ ಕೆಲವು ದಿನಗಳವರೆಗೆ ಮತ್ತೆ ಅವಳು ನನ್ನ ಕಣ್ಣಿಗೆ ಬೀಳಲೇಯಿಲ್ಲ. ಕೆಲವೊಂದು ಸಮಯ ನನ್ನನ್ನು ಹತ್ತಿರ ಸಹ ಬರಗೊಡಲಿಲ್ಲ. ಒಂದೆರಡು ವಾರಗಳಲ್ಲಿ ನಾವು ಹೊರಡುವ ದಿನ ನಿಶ್ಚಯವಾಯಿತು. ಹಿಂದಿನ ದಿನ ನಡುರಾತ್ರಿಯಾದ ಮೇಲೆ ಆವಳು ನನ್ನ ಕೋಣೆಗೆ ಬಂದು ನನ್ನನ್ನು ತೋಳತೆಕ್ಕೆಯಿಂದ ಬಂಧಿಸಿ ಮಗುವಿನಂತೆ ಅಳತೊಡಗಿದಳು. ಆವಳ ಮೂಕ ವರ್ತನೆ ಅತಿ ಆತ್ಮೀಯತೆಯಿಂದ ಪ್ರೀತಿಸಿದ ಹೆಣ್ಣು ತನ್ನವನಿಗೆ ತೋರಬೇಕಾದ ಪ್ರೀತಿ ಆದರಗಳು ಆ ಮುಗುಧೆ ತೋರಿದಳು. ಈ ವರ್ತನೆ ಅವಳು ಎಷ್ಟು ನಿಷ್ಕಳಂಕ ಹೃದಯದಿಂದ ನನ್ನನ್ನು ಪ್ರೀತಿಸಿದವಳೆಂಬುದು ವ್ಯಕ್ತವಾಗುತ್ತದೆ. ಮಾರನೆ ದಿನ ಬೆಳಗಿನಲ್ಲಿ ನಾವು ನಮ್ಮೂರಿಗೆ ಹೊರಟುಬಿಟ್ಟೆವು.

ಒಂದು ವಾರದನಂತರ ಈ ಪ್ರೇಮ ಪ್ರಸಂಗವನ್ನು ನಾನು ಸಂಪೂರ್ಣವಾಗಿ ಮರೆತುಬಿಟ್ಟೆ. ಇದು ನನ್ನ ಅನೇಕ ಪ್ರವಾಸಗಳಲ್ಲಿ ನಡೆಯುತ್ತಲಿದ್ದ ಸರ್ವಸಾಧಾರಣ ಪ್ರಕರಣವಾದುದರಿಂದ ನಾನು ಮರೆತು ಬಿಟ್ಟೆ. ಆದರೆ ಆ

ಹೆಣ್ಣಿಗೆ ಅದುವೇ ಪ್ರೇಮದ ಮೊದಲರಾತ್ರಿಯಾಗಿದ್ದುದರಿಂದಲೂ, ಜಾರಿಣಿ ವೃತ್ತಿಯನ್ನರಿಯದ ನೀತಿವಂತಳಾಗಿದ್ದುದರಿಂದಲೂ, ಅವಳಿಗೆ ಈ ಪ್ರಸಂಗ ಅತಿ ಮಹತ್ವದ್ದಾಗಿ ಪರಿಣಮಿಸಿತೆಂಬುದು ನನ್ನಂತಹ ಕಾಮುಕನಿಗೆ ಆಗ ತಿಳಿಯಲಿಲ್ಲ.

ಮೂವತ್ತು ವರುಷಗಳ ನಂತರ ೧೮೭೬ ರಲ್ಲಿ ಬೇರೆ ಕೆಲಸದ ಮೇಲೆ ಆ ಪ್ರಾಂತದಲ್ಲಿ ಅಲೆದಾಡುವಾಗ ನಾನು ಆ ಹಳ್ಳಿಯಲ್ಲಿ ಅದೇ ಹೋಟಲಿನಲ್ಲಿ ಳಿದುಕೊಂಡಾಗ ನನಗೆ ಅಲ್ಲಿಯ ನವಯುವತಿಯರನ್ನು ಕಂಡಾಗ ನನಗೆ ಹಿಂದಿನ ದಿನಗಳಲ್ಲಿ ನಡೆದುಹೋದ ಸನ್ನಿವೇಶದ ನೆನಪು ಬಂತು. ಸಂಜೆ ಊಟಕ್ಕೆ ಕುಳಿತಾಗ ಹೋಟಲದ ಒಡೆಯನೇ ಬಂದು ಬಡಿಸುತ್ತಿರಲು ನಾನು ಮೂವತ್ತು ವರುಷದ ಹಿಂದಿನ ನನ್ನ ಪ್ರವಾಸದ ನೆನಪು ಹೇಳಿದೆ. ಆಗ ಅವನು “ಸ್ವಾಮೀ ಆಗ ನನ್ನ ತಂದೆ ತಾಯಿಗಳು ನಿಮ್ಮನ್ನು ಆರೈಸಿದರು. ತಾವು ಇಲ್ಲಿ ಇಳಿದುಕೊಂಡ ವಿಷಯ ನನಗೂ ನೆನಪಿನಲ್ಲಿದೆ.” ಎಂದು ಹೇಳಿದ.

ನಾನು ಸುಮ್ಮನಿರಲಿಲ್ಲ. ಅಂದು ನಮ್ಮ ಆರೈಕೆಗಾಗಿ ನಿಯಮಿಸಲ್ಪಟ್ಟ ಆ ಹೆಣ್ಣು ಏನಾದಳೆಂದು ಕೇಳಿದೆ. ಆಗ ಅವನು “ಅಹುದು, ಅವಳು ಹಡೆದು ಕೆಲವು ದಿನಗಳಲ್ಲಿಯೇ ಮರಣಿಸಿದಳು ಪಾಪ!” ಎಂಬ ಉದ್ಗಾರ ದಿಂದ ಅಲ್ಲಿ ದೂರ ತೋಟದಲ್ಲಿ ಕೆಲಸ ಮಾಡುತ್ತಿರುವ ಆ ಹೆಳವನನ್ನು ತೋರಿ ಸುತ್ತ “ಅವನೇ ಅವಳ ಮಗ” ಎಂದ.

ನನಗೆ ನಗು ಬಂತು. “ಇವನು ಬಲು ಕುರೂಪಿಯಾಗಿದ್ದಾನೆ ತಾಯಿಯ ಹೋಲಿಕೆ ಕಂಡುಬರುವದಿಲ್ಲವಲ್ಲ. ತಂದೆಯಂತೆ–” ಎಂದು ಮಾತು ಮುಗಿಸುವುದರ ಮುನ್ನ ಅವನು “ಇಲ್ಲ ಇಲ್ಲ. ಅದೊಂದು ಗುಪ್ತ ವಿಚಾರದ ವಿಷಯವಾಗಿದೆ. ಅವನ ತಂದೆ ಯಾರೆಂಬುದು ಇನ್ನೂ ತಿಳಿದಿಲ್ಲ. ಅವಳು ಸಾಯುವಾಗ ಇವನ ತಂದೆ ಯಾರೆಂಬುದನ್ನು ಹೇಳಲೇ ಇಲ್ಲ. ಅವ ಳಿಗೆ ಓರ್ವ ವಿಟನಿದ್ದನೆಂಬ ವಿಷಯ ಹಡೆದಾಗಲೇ ನಮಗೆ ತಿಳಿದುಬಂತು. ಆದರೆ ಅವಳು ತನ್ನ ಪ್ರಣಯ ಪುರುಷನ ಹೆಸರನ್ನು ಹೇಳಲೇ ಇಲ್ಲ.”

ಅವನ ವಿವರಣೆ ನನ್ನಲ್ಲಿ ಭೀತಿ, ಪಶ್ಚಾತ್ತಾಪಗಳನ್ನುಂಟುಮಾಡಿತು. ಮನಸ್ಸು ಬಿಸುಸುಯ್ದಿತು. ತೋಟದಲ್ಲಿ ಕೆಲಸಕ್ಕೆ ನಿಂತಿದ್ದ ಆ ಹೆಳವನನ್ನು

ಒಂದು ಸಲ ನೋಡಿದೆ. ಅವನು ಮನೆಯ ಹತ್ತಿರ ಬರುತ್ತಿರಲು ಮತ್ತೊಮ್ಮೆ ದಿಟ್ಟಿಸಿ ನೋಡಿದೆ. ಅವನ ಹೊಲಸು ಮೈ, ಕೊಳಕು ಅರಿವೆಗಳನ್ನು ಕಂಡು ನನಗೆ ಅಸಹ್ಯವೆನಿಸಿತು. ನನ್ನೆದುರು ನಿಂತಿದ್ದ ಹೋಟಲು ಒಡೆಯನಿಗೆ ನನ್ನ ಈ ಮನೋಭಾವನೆ ತೋರಗೊಡಲಿಲ್ಲ. ಅವನು "ಅನಾಥನೆಂದು, ಹೆಳವನೆಂದು ನಾವು ಅವನನ್ನು ಇಲ್ಲಿ ಇಟ್ಟುಕೊಂಡಿರುವೆವು. ಈ ಊರಲ್ಲಿ ಯಾರೂ ಅವನನ್ನು ನೋಡಿಕೊಳ್ಳಲು ಒಪ್ಪಲಿಲ್ಲವೆಂದ ಮೇಲೆ ನಾವೇ ಅವನ ಪಾಲಿಗೆ ಪಾಲಕರಾದೆವು. ಪಾಪ ಹೆಳವ! ಅವನ ಕೈಲಾದ ಕೆಲಸ ಮಾಡಿ ನಮ್ಮನ್ನೇ ನೆಚ್ಚಿಕೊಂಡಿರುವನು" ಎಂದು ಹೇಳಿದ.

ಊಟ ಮುಗಿದ ನಂತರ ನಾನು ಮಲಗಿದೆ. ನನಗೆ ನಿದ್ದೆ ಹತ್ತಲೇ ಇಲ್ಲ. ನನ್ನ ಅನಾಚಾರದ ವರ್ತನೆಯಿಂದ ಗರ್ಭಧಾರಣ ಮಾಡಿದ ಆ ತರುಣಿ ಒಂದು ದಿನದ ನನ್ನ ಆತ್ಮಸಂತೋಷಕ್ಕಾಗಿ ಇಂತಹ ಕುರೂಪಿ ಬಾಲಕನನ್ನು ಹೆತ್ತು ಮರಣವನ್ನೈದಿದಳು. ಇದರಲ್ಲಿ ಸ್ವಾರ್ಥವು ನನ್ನದು ಎಂದು ನೊಂದುಕೊಂಡೆ. ನನ್ನ ದಿನಚರಿಯ ಪುಸ್ತಕವನ್ನು ತೆಗೆದು ಅವನು ಜನನವಾದ ವರುಷ ದಿನಾಂಕಗಳನ್ನು ವಿಚಾರಿಸಿ ಇವನು ನನ್ನ ಮಗನೇಯೆಂದು ನಿರ್ಧಾರ ಮಾಡಿಕೊಂಡೆ. ಇದು ನನ್ನ ಮನಸ್ಸಿನಲ್ಲಿರಬೇಕಾದ ವಿಷಯುವೇ ಹೊರತು ಹೊರಗಡೆ ಹೇಳಿಕೊಳ್ಳುವುದು ನಾಚಿಕೆಗೇಡಿನ ಕೆಲಸವೆನಿಸಿತು.

ನಾನು ಆ ಊರಲ್ಲಿ ಹೆಚ್ಚು ದಿನಗಳು ಸರಕಾರದ ಕೆಲಸದಲ್ಲಿರಬೇಕಾಯಿತು. ಅಂಕೆ-ಸಂಖ್ಯೆಗಳನ್ನು ಕೂಡಿಸುವ ಕೆಲಸವು ತಡವಾಗಿಯೇ ನಡೆದಿದ್ದಿತು. ಇವನು ನನ್ನ ಮನೆಯಲ್ಲಿಯೇ ಜನಿಸಿದ್ದರೆ ಎಂತಹ ಸಂಸ್ಕಾರ ದೊರೆಯುತ್ತಿತ್ತುಯೆಂದು ಯೋಚಿಸಿದೆ. ಆದರೆ ಆದೇ ಮನುಷ್ಯನಿಗೆ ತಂದೆಯೆಂಬುವವ ಜೀವಿಸಿದ್ದರೂ, ಅವನು ಪಾಪಕೃತ್ಯದ ಫಲವಾದುದರಿಂದ ಹೀಗೆ ವ್ಯಥೆಪಡಬೇಕಾದುದಕ್ಕೆ ಕಾರಣರಾರು? ಕೆಲಸಮುಯುದ ನಂತರ ತೀರ ಹತ್ತಿರದ ಪರೀಕ್ಷೆಯ ನಂತರ ಅವನಲ್ಲಿ ನನ್ನ ಹೋಲಿಕೆಗಳು ಕಂಡುಬಂದವು. ಆಗ ನನಗುಂಟಾದ ಅನುತಾಪವೆಂತಹದೆಂಬುದನ್ನು ನಾನು ಹೇಳಲಾರೆ.

ಒಂದು ಆದಿತ್ಯವಾರದ ಸಂಜೆ ನಾನು ಅವನು ಪ್ರಾರ್ಥನಾಮಂದಿರಕ್ಕೆ ಹೋಗುತ್ತಿರಲು ಸಂಧಿಸಿದೆ. ಅವನಿಗೆ ೧೦೦ ಸೋಗಳನ್ನು ಕೊಟ್ಟೆ. ಕೃತ

ಜ್ಞತೆಯಿಂದ ನಸುನಕ್ಕ. ಆ ನಗುವು ನನ್ನೆದೆಯನ್ನಿರಿಯಿತು. ಮಾರನೆಯ ದಿನ ಹೋಟೆಲ್ ಒಡೆಯನನ್ನು ಕಂಡು ನಾನು ಈ ಹೆಳವನಿಗೆ ಕೊಂಚ ಹಣದ ಸಹಾಯ ಮಾಡಿದರೆ ಹೇಗೆಂದು ಕೇಳಿದೆ. ಆ ಮಾತಿಗೆ ಅವನು ಇದೇನು ನಿಮಗೆ ಹುಚ್ಚು ಹಿಡಿದಿದೆಯೆ? ಆ ಹೆಳವನಿಗೆ ನಿಮ್ಮ ಹಣದ ಅಗತ್ಯವೇ ಇಲ್ಲ. ಬೇಕಾದರೆ ಅವನಿಗೆ ಅರಿವೆಗಳನ್ನು ಕೊಡಿ, ಸಾಕು. ಅವನು ಮಾಡುತ್ತಿರುವ ಕೆಲಸಕ್ಕೆ ನಾವು ಅವನಿಗೆ ಅನ್ನ ನೀರು ನೀಡುತ್ತಿರುವೆವು" ಎಂದ. ಈ ಮಾತು ಗಳು ನನ್ನಲ್ಲಿ ವೇದನೆಯನ್ನುಂಟುಮಾಡಿದವೆಂದು ಅವನಿಗೆ ತಿಳಿಯದು.

ಮಾರನೆಯ ದಿನ ಸಂಜೆ ಅವನು ಹೆಚ್ಚು ಕುಡಿದು ಮನೆ ಸೇರಿದ, ನನ್ನ ಹಣದಿಂದ ಅವನು ಲಾಭ ಪಡೆದುದು ಈ ವಿಧಾನದಲ್ಲಿ. ಇದೇ ಅವನಿಗೆ ದೊರೆತ ಸಂಸ್ಕಾರ. ನನ್ನ ಮಗ! ಇವನು ಸೆರೆಗುಡುಕ, ಹೆಳವ ನನ್ನ ಮಗ! ಅವನನ್ನು ಈ ಸ್ಥಿತಿಯಲ್ಲಿ ನೋಡುತ್ತ, ದ್ರವ್ಯ ಸಹಾಯ ಮಾಡುತ್ತ, ನಾನು ಇನ್ನೂ ಕೆಲವು ದಿನಗಳವರೆಗೆ ಅಲ್ಲಿ ಉಳಿಯಬಹುದಾ ಗಿತ್ತು. ಆದರೆ ಈ ಬಗೆಯ ವರ್ತನೆಯಿಂದ ಅವನನ್ನು ಆಕಸ್ಮಾತ್ ಮರಣಕ್ಕೆ ಗುರಿಮಾಡುವೆನೆಂದು ಬಗೆದು ನಾನು, ಹೋಟಲು ಒಡೆಯನಲ್ಲಿ ಈ ಅನಾಥ ನಿಗೆಂದು ಕೊಂಚ ಹಣವನ್ನು, ಇರಿಸಿ ನನ್ನೂರಿಗೆ ಹೊರಟೆ.

ಆರು ವರುಷಗಳ ವರೆಗೆ ನಾನು ಈ ಅಸಂಸ್ಕೃತ, ಅನಾಗರಿಕ ಹೆಳವ ನನ್ನು ವರುಷಕ್ಕೊಂದು ಸಲ ಕಾಣುತ್ತಬಂದೆ. ನಾನು ಅವನಿಗೆ ಹಣದ ನೆರವನ್ನೀಯುವುದರಿಂದ ಅವನು ಮತ್ತಿಷ್ಟು ಹೊಲಸು ಅಭ್ಯಾಸಗಳಿಗೆ ತುತ್ತಾ ಗುತ್ತಿದ್ದನೇ ಹೊರತು, ಸಂಸ್ಕಾರದ ಲಕ್ಷಣಗಳು ಅವನಲ್ಲಿ ಕಂಡು ಬರಲೇ ಇಲ್ಲ. ಅವನಿಗಿದ್ದುದು ಒಂದೇ ಚಟ; ಸೆರೆ ಕುಡಿದು ಕುಡಿದು ಹಣ್ಣಾಗು ತ್ತಿದ್ದ. ನನ್ನ ಈ ಬಗೆಯ ಸಹಾಯಕ್ಕೆ ವಿಸ್ಮಯಗೊಂಡ ಹೋಟಲು ಒಡೆ ಯನು ಒಂದು ದಿನ "ಸ್ವಾಮೀ ಈ ನಿಮ್ಮ ನೆರವು ಅವನನ್ನು ಸುಧಾರಿಸುತ್ತಿಲ್ಲ; ಈ ಸ್ವಾತಂತ್ರ್ಯ, ಈ ಹಣದಿಂದ ಅವನು ಮಿತಿ ಮೀರಿ ಸೆರೆ ಕುಡಿಯುವ ಚಟವನ್ನು ಕಲಿತಿದ್ದಾನೆ. ಹಣವಿಲ್ಲದಿದ್ದರೆ ತಾನುಟ್ಟ ಅರಿವೆಗಳನ್ನು ಮಾರಿ ಕೊಂಡು ಸೆರೆಕುಡಿಯುತ್ತಾನೆ ಇದಕ್ಕೇನೆನ್ನುವಿರಿ? ಅವನನ್ನು ಹಿಡಿತದಲ್ಲಿಡು ವುದೇ ಲೇಸು. ಇಂತಹ ಅನಾಥರನ್ನು ನಿಮ್ಮ ಹಣ ಸುಧಾರಿಸದು. ಬೇಕಾ

ದರೆ ನಿಮ್ಮ ಅಂತಸ್ತಿಗೆ ತಕ್ಕಂತಹ ಬಾಲಕರನ್ನು ನಾನು ನಿಮಗಾಗಿ ದೊರಕಿಸುವೆ” ಎಂದ.

ನನ್ನ ಅಂತರಂಗದ ಭಾವನೆ ಹೇಳಿಬಿಡಲೇ ಎನಿಸಿತು. ಆದರೆ–ಆದರೆ–ಸುಮ್ಮನಿದ್ದೆ.

ಮಣ್ಣು–ಹೆಂಟೆಗಳ ನಡುವೆ, ಸೆಗಣಿ ಮುದ್ದೆಗಳಲ್ಲಿ ಕೆಲಸ ಮಾಡುತ್ತಿರುವ ಆ ಹೆಳವನು ನನ್ನ ಮಗ! ಹೋಟೆಲಿನಲ್ಲಿಯ ನನ್ನ ಕಿಟಕಿಯಿಂದ ತಂದೆಯ ಹೆಸರನ್ನರಿಯದೆ, ಅವನು ಜನ್ಮಿಸಿದ ಅಂತಸ್ತನ್ನರಿಯದೆ, ತನ್ನ ಬಾಳನ್ನು ಕೀಳುರೀತಿಯಲ್ಲಿ ತಳ್ಳುತ್ತಲಿರುವ ಈ ಹೆಳವನ ದುಃಖಭಾಜನ ಜೀವನಕ್ಕೆ ಪುರುಷನಾದ ನಾನು, ಮಧ್ಯಮ ವರ್ಗದ ಶ್ರೀಮಂತನಾದ ನಾನು, ನನ್ನ ತಪ್ಪಿಗಾಗಿ ಪರರನ್ನು ಹಿಂಸಿಸಲು ಹಿಂಜರಿಯದ ಕಟುಕ ನಾನು, ಸಮಾಜದಲ್ಲಿ ನೀತಿವಂತನೆಂದೆನಿಸಿಕೊಂಡು, ನನ್ನಲ್ಲಿ ಇಷ್ಟು ಲೋಪ ದೋಷಗಳಿದ್ದರೂ, ಬಾಳುತ್ತಿರುವ ನಾನು ಯಾರ ಕ್ಷಮೆಯನ್ನು ಕೋರಲಿ? ನನಗೆ ಮನಶ್ಶಾಂತಿ ದೊರೆಯುವುದಾದರೂ ಎಂತು? ಎಷ್ಟೋಸಲ ಯಾರೂ ಇಲ್ಲದ ಸಮಯದಲ್ಲಿ ಅವನನ್ನು ಅಪ್ಪಿಕೊಂಡು ಮುದ್ದಿಸಲೇ ಎಂದೆನಿಸುತ್ತಿತ್ತು. ಇದು ನನ್ನಲ್ಲಿರಬೇಕಾದ ಮಾನವ ಮನೋಭಾವನೆಯೇ ಸರಿ. ಆದರೆ ಸಮಾಜ ಇದನ್ನು ಮನ್ನಿಸದು! ಇದು, ಪುರುಷರೆಂದೆನಿಸಿಕೊಂಡ ನಮ್ಮ ವರ್ತನೆಯ ನಿದರ್ಶನ!” ಎಂದು ನನ್ನ ಕತೆಯನ್ನು ಮುಗಿಸಿದೆ.

ಕಲಾವಿದನು ಸುಮ್ಮನಾಗಲು, ದೇಶಭಕ್ತನು “ಅಹುದು ನಾವು ಅನಾಥ ಬಾಲಕರಲ್ಲಿ ಮಮತೆ ಆದರಗಳನ್ನು ತೋರಲೇ ಬೇಕು” ಎಂದು ಹೇಳಿ ಸುಮ್ಮನಾದ.

ಅಲ್ಲಿಗೆ ನಮ್ಮ ವಾಕಿಂಗು ಮುಗಿಯಿತು. ಕತ್ತಲು ಕವಿದುದರಿಂದ ಬೇಗ ಮನೆಗಳಿಗೆ ತೆರಳಿದೆವು.

—Fecundity

## ಮುಡಿಯದ ಹೂ!

ಅಡ್ಮಿರಲ್ ದ-ಲಾ-ವಾಲೀಯವರು ತಮ್ಮ ಅನುಭವಕ್ಕೆ ಬಂದ ಕರುಣಾಜನಕ ಚಿತ್ರದ ವಿವರವನ್ನು ಹೀಗೆ ಹೇಳಿದರು.:—

"ನನಗೆ ಆಗ ಮೂವತ್ತು ವರುಷ. ಬ್ರಿಟಿಷ ಸರಕಾರದ ನೆರವಿನಿಂದ ನಾನು ಹಿಂದುಸ್ಥಾನದ ಮಹಾರಾಜರುಗಳ ರಾಜಧಾನಿಗಳಿಗೆ ಸಂಶೋಧನೆ ನಡೆಸುವ ಕೆಲಸದ ಮೇಲೆ ಹೋಗಲು ಅವಕಾಶವೊದಗಿತು. ನಾನು ನೌಕಾ ಪಡೆಯಲ್ಲಿದ್ದೆ. ಅನೇಕ ಸಂಸ್ಥಾನಗಳನ್ನು ಸುತ್ತಿ, ರಾಜ ಮಹಾರಾಜರುಗಳಿಂದ ಸತ್ಕಾರ ಪಡೆದು, ಆ ರಮ್ಯ ಪ್ರದೇಶಗಳ ಸೌಂದರ್ಯವನ್ನು ಕಂಡು ಆನಂದ ಹೊಂದಿದೆ. ಹಿಂದೂ ದೇಶದ ರಾಜರುಗಳ ಸೀಮೆ ಅಪ್ಸರೆಯರ ಕಾಲದಲ್ಲಿ ವಿಹರಿಸುತ್ತಿರುವಂತೆನಿಸಿತು.

ನನ್ನ ಸಂಶೋಧನೆ ಮುಗಿಯುವ ಹೊತ್ತಿಗೆ ನಾನು ಮಧ್ಯಹಿಂದುಸ್ಥಾನದ ಪ್ರಸಿದ್ಧ ರಾಜಧಾನಿಗೆ ಹೋದೆ. ಅದು ಉತ್ತಮ ಸ್ಥಿತಿಯಲ್ಲಿ ಬೆಳೆದು ಹೆಸರಾಗಿದ್ದ ನಗರ. ಆದರೆ ಈಗ ಬಲು ಕ್ಷೀಣದೆಸೆಯಲ್ಲಿದೆ. ರಾಜ ಮದನನೆಂಬವನಿಂದ ರಾಜ್ಯಕ್ಕೆ ಈ ಅವಸ್ಥೆ ಬಂದಿತಂತೆ. ಅವನು ಮೂರ್ಖ, ಕ್ರೂರಸ್ವಭಾವಿ, ವಿದೇಶಿ ಜನರಲ್ಲಿ ಭಕ್ತಿ ಆದರಗಳುಳ್ಳವನು. ನೋಡುವುದಕ್ಕೆ ಹೆಣ್ಣಿನಂತಹ ಹಾವಭಾವಗಳುಳ್ಳವನಾಗಿದ್ದರೂ, ಶೀಘ್ರಕೋಪಿ. ಈ ನಗರವು ಸುಂದರ ಸರೋವರದ ದಂಡೆಯಲ್ಲಿ ನಿರ್ಮಿತವಾಗಿದೆ. ಆ ಸರೋವರದ ನೀರು ಆ ನಗರದ ಅನೇಕ ದಿವ್ಯರಾಜಭವನಗಳನ್ನು ದಿನವೂ ನಿರ್ಮಲಗೊಳಿಸುವಂತಿದೆ. ಒಂದು ಕಣಿವೆಯ ಬುಡದಲ್ಲಿದ್ದ ಈ ಭವ್ಯ ನಗರವು ದೂರದಿಂದ ಒಂದು ಬಿಳಿ ಚಿಕ್ಕೆಯಂತೆ ಕಂಡುಬರುತ್ತಿತ್ತು. ಹಿಂದುಸ್ಥಾನದ ವಾಸ್ತುಶಿಲ್ಪಕಲೆಯ ವೈಶಿಷ್ಟ್ಯವನ್ನು ತಿಳಿಸಿ ಹೇಳುವಂತಹ ಸುಂದರ ಮಂದಿರಗಳು ಇಲ್ಲಿದ್ದವು.

ನಗರವನ್ನು ಸಮೀಪಿಸಿದಂತೆಲ್ಲ ಆ ಊರಿನ ನಿಸರ್ಗದತ್ತ ಸೊಬಗನ್ನು ಕಂಡು ನನ್ನ ಎದೆ ಉತ್ಸಾಹದಿಂದ ಕುಣಿಯತೊಡಗಿತು. ಇನ್ನೂ ಒಂದು ತಾಸಿನ ಪ್ರಯಾಣದಷ್ಟು ದೂರ ಇರುವಾಗಲೇ ನನ್ನನ್ನು ಸ್ವಾಗತಿಸಲು ಅರಮನೆಯ ಆನೆ, ಸಿಬ್ಬಂದಿಗಳು ಬಂದಿದ್ದವು. ಅವರು ನನ್ನನ್ನು ಎದುರುಗೊಂಡು ಸಂಭ್ರಮದಿಂದ ಕರೆದೊಯ್ದರು. ರಾಜನು ತಾನೇ ನನ್ನನ್ನು ಅರಮನೆಯ ಮುಂದೆ ಎದುರ್ಗೊಂಡು ಕ್ಷೇಮ ಸಮಾಚಾರವನ್ನು ವಿಚಾರಿಸಿದ. ಅರಮನೆ ಸಿಬ್ಬಂದಿಯವರ ನಿಲುವಾಭರಣಗಳು, ಬಲು ಬೆಲೆಯ ಉಡಿಗೆ ತೊಡುಗೆಗಳು ನನ್ನನ್ನು ಬೆರಗುಗೊಳಿಸಿದವು. ಮಹಾರಾಜನ ವಜ್ರ ವೈಢೂರ್ಯ ಆಭರಣಗಳ ಬೆಲೆ ಏನೆಂಬುದನ್ನು ನಿಶ್ಚಯಿಸುವುದು ನನಗೆ ಕಷ್ಟವೆನಿಸಿತು. ಆವನ ಕಿರೀಟದಲ್ಲಿ ಮೆರೆಯುತ್ತಿದ್ದ ಒಂದು ರತ್ನವು ಮುಂದೋರೇ ರಾಜ್ಯದ ರಾಜಮನೆತನದವರಿಂದ ತಲೆತಲಾಂತರಗಳಿಂದ ದತ್ತವಾದುದೆಂದು ತಿಳಿಯಿತು.

ಆ ರಾಜನ ವಯಸ್ಸು ಇಪ್ಪತ್ತೈದಕ್ಕೆ ಮೀರರಿಲಿಲ್ಲ. ಅವನ ಬಣ್ಣ ಕಪ್ಪು; ದಪ್ಪವಾದ ತುಟಿಗಳು, ವಿಶಾಲವಾದ ಕಣ್ಣುಗಳು, ಉಂಗುರುಂಗುರ ಕೂದಲುಗಳ ಗಡ್ಡ, ಹೊಳೆಯುವ ಹಲ್ಲುಗಳು, ಯಂತ್ರದಂತೆ ಅವನು ಆಗಾಗ ನಗುವ ರೀತಿ, ಪಾಶ್ಚಾತ್ಯರನ್ನು ಅನುಕರಿಸುವ ಅವನ ಸಭಾಮರ್ಯಾದೆಯ ರೀತಿ ಮುಂತಾದವು ನನಗೆ ಆಶ್ಚರ್ಯವನ್ನುಂಟುಮಾಡಿದವು. ಬಹು ಎತ್ತರವಲ್ಲದ ಆಸನದ ಮೇಲೆ ಅವನ ಪಕ್ಕದಲ್ಲಿಯೇ ನನ್ನನ್ನು ಬಲವಂತದಿಂದ ಕುಳ್ಳಿರಿಸಿಕೊಂಡ. ನನ್ನ ಭವ್ಯವಾದ ದೇಹಾಕೃತಿಯನ್ನು ಕಂಡು ನಾನು ಉತ್ತಮ ಆಟಗಾರನೆಂದು ಭಾವಿಸಿ ಅರಮನೆಯ ಗರಡಿಮನೆಗಳನ್ನೂ, ಕುಸ್ತಿಯ ಕಣಗಳನ್ನೂ ಆಸ್ಥೆಯಿಂದ ತೋರಿಸಿದ. ನನ್ನೆದುರು ಕುಸ್ತಿ, ಮತ್ತು ಕತ್ತಿಗಳ ಆಟ ನಡೆದವು. ಕೇವಲ ಮನರಂಜನೆಗೆಂದು ಆವರಾಡುವ ಕತ್ತಿಗಳ ಆಟದಲ್ಲಿ ಆವರ ದೇಹದಿಂದ ರಕ್ತ ಸುರಿಯುತ್ತಿದ್ದರೂ ಆದನ್ನು ಸೈರಿಸುವ ಸ್ಥೈರ್ಯವು ಆ ಆಟಗಾರರಲ್ಲಿತ್ತು. ಆಟದಲ್ಲಿ ಓರ್ವನು ಬಹಳವಾಗಿ ಗಾಯಗೊಂಡುದರಿಂದ ಆಟವು ಅಲ್ಲಿಗೇ ಬೇಗ ನಿಲ್ಲಿಸಲ್ಪಟ್ಟುದುದು ಅವನಿಗೆ ಬೇಸರವೆನಿಸಿತು. ಇವುಗಳೆಲ್ಲವೂ ನನಗೆ ರುಚಿಸದಿದ್ದರೂ ಮರ್ಯಾದೆಗೆಂದು ನನ್ನ ಸಂತೋಷವನ್ನು ವ್ಯಕ್ತಮಾಡಿದೆ.

ಅವನ ರಾಜಮಂದಿರ ಭವ್ಯವಾಗಿತ್ತು. ನನಗಾಗಿ ಅಲಂಕೃತವಾದ ಕೋಣೆಗೆ ನನ್ನನ್ನು ಕರೆದೊಯ್ದರು. ಊಟವಾದ ನಂತರ, ಅರಿವೆಗಳನ್ನು ಬದಲಾಯಿಸಿ, ಸ್ನಾನ ಮುಗಿಸುವ ಹೊತ್ತಿಗೆ ರಾಜನೇ ನನ್ನನ್ನು ಕಾಣಲು ಬರುತ್ತಿರುವನೆಂದು ಅವನ ಕಾರ್ಯದರ್ಶಿ ಬಂದು ಹೇಳಿದನು. ರಾಜನು ಬಂದು ವಿನಯದಿಂದ ನನ್ನ ಕೈಕುಲುಕಿ ಹಲವಾರು ಪ್ರಶ್ನೆಗಳನ್ನು ಕೇಳತೊಡಗಿದ. ಅವನ ಕುತೂಹಲ, ಆತುರ, ನನ್ನನ್ನು ಬೆರಗುಗೊಳಿಸಿದವು. ಮುಂದೆ ತಮ್ಮ ಹಿಂದಿನ ಅರಮನೆಯ ಅವಶೇಷಗಳನ್ನು ತೋರಿಸಲು ಅಲ್ಲಿಗೆ ಕರೆದು ಕೊಂಡು ಹೋದ. ಆ ಹಾಳು ಅರಮನೆ ಒಂದು ಕಲ್ಲಿನ ಕುಪ್ಪೆಯಂತೆ ನನಗೆ ಕಂಡುಬಂದಿತು. ಅದರ ನಡುವೆ ತಿರುಗಾಡುತ್ತಿದ್ದ ಅರಮನೆಯ ಜನರು ಕಾಡು ಕೋತಿಗಳಂತೆ ಕಾಣಿಸಿದರು. ನಮ್ಮ ಆಗಮನದಿಂದ ಅಲ್ಲಿದ್ದ ಗಂಡು ಹೆಣ್ಣುಗಳು ಭೀತಿಯಿಂದ ಮಾಯವಾದರು. ಆ ಅವಶೇಷಗಳನ್ನು ನೋಡಿ ನಾನು ಸಂತೋಷಪಟ್ಟೆನೆಂದು ತಿಳಿದು ರಾಜನು ಹಿಗ್ಗಿದ. ಮಾರನೆಯ ದಿನ ನನ್ನ ಆಗಮನಾರ್ಥವಾಗಿ ಹುಲಿ ಬೇಟೆಯನ್ನೇರ್ಪಡಿಸಲಾಗಿದೆ ಯೆಂದು ಹೇಳಿ, ಸಂತೋಷದಿಂದ ಕುಣಿದಾಡಿದ. ಮುಂದೆ ನೂರಾರು ಸಲ ಇಂತಹ ಬೇಟೆಯಲ್ಲಿ ನಾನು ನಿರ್ವಾಹವಿಲ್ಲದೆ ಭಾಗವಹಿಸಿದೆ. ಹೀಗೆ ಮೂಕ ಪ್ರಾಣಿಗಳ ರಕ್ತಪಾತ ಆಗುವುದು ನನಗೆ ಹೆಚ್ಚಿನ ನೋವನ್ನುಂಟು ಮಾಡಿತು.

ಆನಂತರ ನನ್ನ ಸರಕಾರದ ಕೆಲಸದಲ್ಲಿ ನಾನು ಮಗ್ನನಾದೆ. ಆದರೂ ದಿನವೂ ರಾಜನ ದರ್ಶನವಾಗುತ್ತಿತ್ತು. ಆತನಿಂದ ನನಗೆ ಅನಿರೀಕ್ಷಿತವಾಗಿ ಅನೇಕ ಬೆಲೆಯುಳ್ಳ ಕಾಣಿಕೆಗಳು ಬರತೊಡಗಿದವು. ದಿನವೂ ನನ್ನ ಮನಸ್ಸಂತೋಷಕ್ಕೆಂದು ಅನೇಕ ಬಗೆಯ ವಿನೋದಾವಳಿಗಳು ನಡೆಯುತ್ತಲಿದ್ದವು. ನನಗೆ ಬೇಸರವೆನಿಸಿದಾಗ ನಾನು ಓರ್ವನೇ ಅರಮನೆಯ ಹೊರಗೆ ವಿಹಾರಕ್ಕೆಂದು ಸಂಜೆ ಸಮಯ ಹೋಗುವದು ವಾಡಿಕೆಯಾಗಿತ್ತು. ಒಂದು ದಿನ ನಾನು ಮನೆಗೆ ಹಿಂತಿರುಗಿದಾಗ ರಾಜನು ನನ್ನ ಆರೈಕೆಗೆಂದು ನೇಮಿಸಿದ್ದ ಉಚ್ಚ ಅಧಿಕಾರಿ ಹರಿಬಾಬಾ ಅರಮನೆಯ ಬಾಗಿಲ ಮುಂದೆ ನನ್ನನ್ನು ಕಂಡು ಆನಂದದಿಂದ, ನನಗೆ ಅಂದು ರಾಜನು ಮತ್ತೊಂದು ಬೆಲೆಯುಳ್ಳ ಕಾಣಿಕೆ

ಕಳಿಸಿರುವನೆಂದೂ, ಆ ಬಹುಮಾನ ನನ್ನ ಬಿಡದಿಮನೆಯಲ್ಲಿ ಇರುವುದೆಂದೂ ನಮ್ರತೆಯಿಂದ ಸೂಚಿಸಿದ. ಈ ಕಾಣಿಕೆಯನ್ನು ಇಷ್ಟು ತಡವಾಗಿ ಅರ್ಪಿಸಿದುದಕ್ಕೆ ರಾಜನು ಕ್ಷಮೆಯನ್ನು ಬೇಡಿದ್ದಾನೆಂದೂ ಹೇಳಿ ಹೊರಟು ಹೋದ.

ನಾನು ಇರುತ್ತಿದ್ದ ಭವನದ ಮುಂದೆ ಆರು ಜನ ಕುಮಾರಿಯರು ನನಗಾಗಿ ಕಾದಿರುವುದನ್ನು ಕಂಡು ವಿಸ್ಮಿತನಾದೆ! ಇವರ ವಯಸ್ಸು ಎಂಟರಿಂದ ಹತ್ತರವರೆಗಿತ್ತು. ಇಂತಹ ಬಾಲಿಕೆಯರನ್ನು ಕಾಣಿಕೆಯಾಗಿ ಕೊಡುವುದು ವಿಚಿತ್ರವೆನಿಸಿತು. ಅವರನ್ನು ರಾಜನ ಹತ್ತಿರ ಮತ್ತೆ ಕಳಿಸಿಬಿಡುವುದೆಂದು ಯೋಚಿಸಿದೆ. ಆದರೆ ಹಾಗೆ ಮಾಡುವುದು ನನ್ನ ಮರ್ಯಾದೆಗೆ ಚ್ಯುತಿಯೆಂದು ಭಾವಿಸಿ ಸುಮ್ಮನಿದ್ದೆ. ಸ್ವಲ್ಪ ಸಮಯದ ನಂತರ ಅವರಲ್ಲಿಯ ಹಿರಿಯಳ ಹೆಸರನ್ನು ಕೇಳಿದೆ.

'ಚಾಲೀ' ಎಂದಳು ಆ ಕುಮಾರಿ.

ನಿಂಬೆ ಹಣ್ಣಿನ ವೈಬಣ್ಣವುಳ್ಳ ಈ ಬಾಲಿಕೆಯು ಅತಿ ರೂಪವತಿ. ಅವಳ ಅರಳಿದ ಕಣ್ಣುಗಳು, ಮಾಟವಾದ ಮುಖ, ಮೈಕಟ್ಟು, ನನ್ನನ್ನು ಆಕರ್ಷಿಸಿದವು. ಅವರ ಭಾಷೆ ಆಗಲೇ ನನಗೆ ಕೊಂಚ ಕೊಂಚ ಬರುತ್ತಿತ್ತು. ಆದುದರಿಂದ ಆ ಹುಡುಗಿಯನ್ನುದ್ದೇಶಿಸಿ "ನೀವೇತಕ್ಕೆ ಇಲ್ಲಿಗೆ ಬಂದಿರುವಿರಿ?" ಎಂದು ಕೇಳಿದೆ.

"ತಮ್ಮಲ್ಲಿ ಸೇವೆ ಮಾಡಲು ಮಹಾರಾಜರು ನಮ್ಮನ್ನು ನಿಮಗೆ ಸಂಪೂರ್ಣವಾಗಿ ಅರ್ಪಿಸಿರುವರು. ನಾವು ನಿಮ್ಮ ಅಧೀನದ ವಸ್ತುಗಳು. ಹೇಗೆ ಬೇಕಾದರೆ ಹಾಗೆ ಉಪಯೋಗಿಸಿಕೊಳ್ಳಬಹುದು" ಎಂದು ವಿನಯದಿಂದ ಹೇಳಿದಳು. ಆ ಎಲ್ಲ ಬಾಲಿಕೆಯರೂ ಇದೇ ಬಗೆಯ ಉತ್ತರವನ್ನಿತ್ತರು!

ಆಗ ನಾನು ತೀರ ಚಿಕ್ಕವಳ ಕೈಮುಟ್ಟಿ ಮುದ್ದಿಸಿದೆ. ಇದನ್ನರಿತು ಉಳಿದ ಕುಮಾರಿಯರು ನನ್ನ ಭವನದಿಂದ ದೂರ ಸರಿಯಲು ಯತ್ನಿಸಿದರು. ನಾನವರನ್ನು ಹೋಗಗೊಡದೆ ಅವರ ನಡುವೆ ಕುಳಿತುಕೊಂಡು ಅನೇಕ ಬಗೆಯ ಕತೆಗಳನ್ನು ಹೇಳತೊಡಗಿದೆ. ನಿಷ್ಠೆಯಿಂದ ಅವರು ನನ್ನ ಕತೆ

ಗಳನ್ನು ಕೇಳಿದರು. ಇದಾದನಂತರ ನನ್ನ ಸೇವಕ ಲಕ್ಷ್ಮಣನು ನನ್ನ ಆಜ್ಞೆ ಯಂತೆ ಅವರಿಗೆ ತಿಂಡಿ–ತಿನಸುಗಳನ್ನು ತಂದುಕೊಟ್ಟನು. ಅವರು ನನ್ನ ಮಡದಿಯರೆಂಬ ಭಾವನೆಯಿಂದ ಇವರ ಆರೈಕೆಗಾಗಿ ರಾಜನು ನಾಲ್ಕು ಜನ ಹೆಣ್ಣಾಳುಗಳನ್ನು ಕಳಿಸಿದ್ದ. ರಾತ್ರಿಯಾದೊಡನೆಯೇ ಈ ಆರು ಜನರನ್ನೂ ಇವರ ವಶಕ್ಕೆ ಒಪ್ಪಿಸುತ್ತಿದ್ದೆ. ಹೀಗೆ ಒಂದು ವಾರ ನಡೆಯಿತು. ಈ ಹೊತ್ತಿಗೆ ಹಿರಿಯವಳು ನನ್ನಲ್ಲಿ ಹೆಚ್ಚಿನ ಮಮತೆಯನ್ನು ತೋರುತ್ತ ನನಗೆ ತೀರ ಹತ್ತಿರವಾದಳು. ಅವಳ ಮುಗ್ಧ ಮುಖವು ನನ್ನಲ್ಲಿ ಪ್ರೇಮಾದರಗಳ ನ್ನುಂಟುಮಾಡಿತು. ಅವಳ ನಯವಿನಯ, ಭಯ ಭೀತಿಗಳಿಂದ ಕೂಡಿದ ಸದ್ವರ್ತನೆ, ಇಂಗಿತ ಸ್ವಭಾವಗಳು ನನ್ನನ್ನು ಮರುಳುಗೊಳಿಸಿದವು. ಅವ ಳನ್ನು ತಂಪೆಯೆಂಬ ಕನಿಕರದ ಕಣ್ಣಿನಿಂದ ನೋಡತೊಡಗಿದೆ. ನನ್ನ ಚರಣ ದಾಸಿಯಾಗಲು ಬಂದ ಅವಳಿಗೆ ಮಗಳ ಸ್ಥಾನ ದೊರೆಯಿತು. ಚಾಲಿ ಯಾವಾಗಲೂ ನನ್ನ ಹತ್ತಿರವೇ ಇರತೊಡಗಿದಳು.

ನಾನು ಸಂಜೆ ಸಮಯದಲ್ಲಿ ಹಾಳು ಅರಮನೆಯ ಬಯಲಿನಲ್ಲಿ ವಿಹರಿ ಸುವಾಗ ಈ ಮುಗ್ಧಬಾಲೆ ನನ್ನೊಂದಿಗೆ ಇರುತ್ತಿದ್ದಳು. ಅಲ್ಲಿ ನಾನು ಕುಳಿ ತಿರುವಾಗ ನನ್ನ ತೊಡೆಯ ಮೇಲೆ ನಿಸ್ಸಂಕೋಚ ಭಾವನೆಯಿಂದ ಮಲಗು ವಳು. ಮಗಳಂತೆ ಆಡುವಳು; ನಗುವಳು; ಕೆಲಿಯುವಳು, ಅವಳ ಎಳೆ ಮುಖವನ್ನು ನೋಡಿ ನನ್ನ ಮನಸ್ಸು ಅಯ್ಯೋ ಎನ್ನುತ್ತಿತ್ತು. ಆ ಬಯಲಿ ನಲ್ಲಿ ಕೋತಿಗಳು ಬಹಳ. ಅವುಗಳಿಗೆಂದು ನಾನು ಅನೇಕ ಹಣ್ಣು ಹಂಪಲ ಗಳನ್ನು ತಂದು ಅವುಗಳಿಗೆ ನೀಡುತ್ತಿದ್ದೆ.

ಅನೇಕ ಸಂಜೆಗಳನ್ನು ಚಾಲಿಯ ಜತೆಯಲ್ಲಿ ಅರಮನೆಯ ವಿಹಾರ ಸರೋವರದ ಪೂರ್ಣ ಸುಂದ ದೃಶ್ಯವೆಲ್ಲ ಕಾಣುವ ಹೊರ ಜಗುಲಿಯ ಮೇಲೆ ನಿಂತು ಆನಂದದಲ್ಲಿ ಕಳೆಯುತ್ತಿದ್ದೆ. ಕೆಂಪು ಬಣ್ಣದ ಸೂರ್ಯನು ಮುಳು ಗುವ ಆ ರಮ್ಯನೋಟ, ಮರುಕ್ಷಣವೇ ಮೆಲ್ಲಮೆಲ್ಲನೆ ಉದಯಿಸುವ ಮಂದ ಕಾಂತಿಯ ಚಂದಿರನ ಮುಖದ ಛಾಯೆ! ಇವುಗಳ ಸಮ್ಮಿಳನದ ಆ ಸಂಧಿ ಸಮಯವನ್ನು ನಾನು ಶಾಂತಚಿತ್ತದಿಂದ ನಿರೀಕ್ಷಿಸಿದಂತೆ ಚಾಲಿಯೂ ನಿಸ ರ್ಗದ ಸೊಬಗಿನಲ್ಲಿ ತನ್ಮಯಳಾಗುತ್ತಿದ್ದಳು. ಅವಳು ಹೀಗೆ ಮೈಮರೆತಾಗ

ನಾನು ಆನಂದದ ಲಹರಿಯಲ್ಲಿ ಅವಳ ಚಲುವಾದ ಮುಖವನ್ನು ಆತುರದಿಂದ ಹಿಡಿದೆತ್ತಿ ಅವಳ ಕೋಮಲ ಗಲ್ಲಗಳನ್ನು ಮುದ್ದಿಸುತ್ತಲಿದ್ದೆ. ಕೆಲಸಮಯ ಅವಳ ಮೃದು ಅಧರಗಳನ್ನೂ ಮುದ್ದಿಸಿದೆ. ಆಗ ನನಗೆ ಆಗುತ್ತಿದ್ದ ಅವ್ಯಕ್ತ ಆನಂದ ಕಾವ್ಯಮಯವಾಗಿತ್ತು.

ರಾಜನಿಂದ ನನಗೆ ದಿನವೂ ಕಾಣಿಕೆಗಳ ಸುರಿಮಳೆ ಆಗುತ್ತಲೇ ಇತ್ತು. ಒಂದು ದಿನ ಆತನು ರಟ್ಟಿನ ಪೆಟ್ಟಿಗೆಯೊಂದನ್ನು ಕಳುಹಿಸಿದ. ಅದರ ಹೊರ ಗಡೆಯಲ್ಲಿ ಕಪ–ಚಿಪ್ಪಗಳನ್ನು ಅಮರಿಸಿದ್ದರು. ಅವುಗಳ ನಡುವೆ ದಿವ್ಯವಾದ ರತ್ನದ ಹರಳು ಹೊಳೆಯುತ್ತಿತ್ತು ! ಈ ಕಾಣಿಕೆ ಚಾಲಿಯ ಎಳೆ ಮನಸ್ಸಿಗೆ ಹೆಚ್ಚಿನ ಹರುಷವನ್ನುಂಟುಮಾಡಿತು. ಅದನ್ನು ನನ್ನ ಮೇಜಿನ ಮೇಲಿರಿಸಿದೆ. ಚಾಲಿಯು ಮಾತ್ರ ಅದನ್ನು ಬಲು ಉತ್ಸುಕತೆಯಿಂದ ನೋಡತೊಡಗಿದಳು. ಆದರೆ ಅದನ್ನು ಮುಟ್ಟುವುದಕ್ಕೆ ಅಂಜುತ್ತಿದ್ದಳು. ನನ್ನ ಅಪ್ಪಣೆ ಪಡೆದು ಅದನ್ನು ಮುಟ್ಟಿದಾಗ ಅವಳಿಗೆ ಆದ ಆನಂದ ಹೇಳತೀರದು.

ಆ ರಾಜಧಾನಿಯಲ್ಲಿ ನನ್ನ ಕೆಲಸ ಮುಗಿಯಿತು. ನಾನು ಹೊರಡ ಬೇಕಾದ ದಿನವನ್ನು ಮನಸ್ಸಿನೊಳಗೆ ನಿಶ್ಚಯಿಸಿದೆ. ಇವಳಿಂದ ದೂರಾಗುವ ಈ ನಿಶ್ಚಯಕ್ಕೆ ಬರಬೇಕಾದರೆ ನಾನು ಅನುಭವಿಸಿದ ಮಾನಸಿಕ ಯಾತನೆ ಯನ್ನು ಇಲ್ಲಿ ಬರೆಯಲಾರೆ. ಇದು ಸ್ವಂತ ಅನುಭವದ ವಿಷಯ. ಆ ಎಳೆ ಕಂದಮ್ಮನನ್ನು ತೊರೆದು ಹೋಗಲು ನನ್ನ ಮನಸ್ಸು ನಿರಾಕರಿಸುತ್ತಿತ್ತು. ಆದರೆ ಸರಕಾರದ ಕೆಲಸ; ಹೊರಡಲೇ ಬೇಕಾಗಿತ್ತು. ನನಗೆ ಬೀಳ್ಕೊಡುವ ಸಮಾರಂಭ ಅತ್ಯಂತ ವೈಭವದಲ್ಲಿ ನಡೆಯಿತು.

ನನ್ನ ಪ್ರಿಯ ವಧುವಾದ ಚಾಲಿಯಿಂದ ನಾನು ದೂರಾದ ಆ ಸನ್ನಿವೇಶ ಬಹಳ ಯಾತನೆಯನ್ನುಂಟುಮಾಡಿತು. ಅಂತಹ ಮನಕರುಗುವ ಸ್ಥಿತಿಯನ್ನು ಈ ಹಿಂದೆ ನಾನೆಂದೂ ಅನುಭವಿಸಿರಲಿಲ್ಲ. ಅವಳ ದುಃಖವಂತೂ ಹೇಳ ತೀರದು. ಅವಳ ದುಃಖ ಶಮನವಾಗಲು ಅವಳನ್ನು ತೋಳತೆಕ್ಕೆಯಲ್ಲಿಟ್ಟು ಮುದ್ದಿಸಿದೆ. ಆದರೂ ಅವಳ ದುಃಖ ನಿಲ್ಲಲಿಲ್ಲ. ಕೊನೆಗೊಮ್ಮೆ ನಿರ್ಧಾ ರಕ್ಕೆ ಬಂದು ಆ ರಟ್ಟಿನ ಪೆಟ್ಟಿಗೆಯನ್ನು ಅವಳ ಕೈಯಲ್ಲಿಟ್ಟು "ಇನ್ನುಮೇಲೆ ಇದು ನಿನ್ನದು" ಎಂದೆ.

ಆಗ ಅವಳು ಹಸನ್ಮುಖಿಯಾದಳು. ಅಂತರಂಗದ ಹರುಷ ಹೊರ ಚಿಮ್ಮಿತು. ಕನಸು ನನಸಾದರೆ ದೊರೆಯುವ ಆನಂದದಲ್ಲಿ ವೈಮರೆಯುವ ಪ್ರಣಯಿಯಂತೆ ನನ್ನನ್ನವಳು ಆಲಂಗಿಸಿದಳು. ಕೆಲ ಸಮಯ ಅವಳಿಗೆ ಎಚ್ಚರವೇ ಇರಲಿಲ್ಲ!

ನಾನು ಹೊರಡುವಾಗ ಅವಳ ಅಳಲು ಹೇಳತೀರದು. ಅವಳಿಗೆ ಹೆತ್ತ ತಂದೆಯು ಕೊಡುವ ಮಮತೆಯ ಮುದ್ದುಗಳ ಜತೆಗೆ ಬಗೆ-ಬಗೆಯ ಬಹು ಮಾನಗಳನ್ನಿತ್ತು, ಅಲ್ಲಿಂದ ಹೊರಟೇ ಬಿಟ್ಟೆ.

§ § § § § § § §

ಎರಡು ವರುಷಗಳ ನಂತರ ಮತ್ತೆ ಸರಕಾರದ ಕೆಲಸದ ಮೇಲೆ ಮುಂಬಯಿಗೆ ಬಂದೆ. ಅಲ್ಲಿಯ ಕೆಲಸವನ್ನು ಬೇಗ ಮುಗಿಸಿ, ಆ ಮಹಾ ರಾಜನನ್ನೂ ಮತ್ತೆ ನನ್ನ ಚಾಲಿಯನ್ನೂ ಕಾಣುವ ಆಶೆಯಿಂದ ಆ ರಾಜ ಧಾನಿಗೆ ಹೋದೆ. ರಾಜನ ಆತಿಥ್ಯವನ್ನು ಕೈಕೊಂಡು ಮೊದಲನೆಯ ದಿನ ಆತನಲ್ಲಿಯೇ ಉಳಿದೆ. ರಾಜನು ಸರ್ವ ಸಮಯದಲ್ಲಿಯೂ ನನ್ನ ಹತ್ತಿರವೇ ಇದ್ದ ಕಾರಣ ಚಾಲಿಯನ್ನು ಕಾಣಲು ಅಂದು ಬಿಡುವೇ ದೊರೆಯಲಿಲ್ಲ. ಆದರೆ ರಾತ್ರಿ ಬಹಳ ಹೊತ್ತಾದ ಮೇಲೆ, ನಾನೋರ್ವನೇ ಹರಿಬಾಬಾನನ್ನು ಕರೆದು ಚಾಲಿಯ ವಿಷಯ ಕೇಳಿದೆ.

ಅವಳ ಹೆಸರನ್ನು ಎತ್ತಿದ ಕೂಡಲೇ ಅವನ ಮುಖ ಬಾಡಿತು. ತಲೆ ತಗ್ಗಿಸಿ ಕ್ಷೀಣ ಸ್ವರದಲ್ಲಿ "ಅವಳ ಮಾತು ಈಗೇಕೆ" ಎಂದ.

"ಏಕೆ? ಅವಳು ಒಳ್ಳೆಯ ಹುಡುಗಿ"

"ಆದರೆ........ಆದರೆ........ಆ ವಿಷಮ ವಿಷಯ........"

"ಏನು? ಏನೆಂದೆ? ಅವಳಿಗೇನಾಯಿತು? ಈಗ ಅವಳೆಲ್ಲಿರುವಳು ಹರಿಬಾಬಾ?"

"ಅವಳು.....................!"

"ಏನು....? ಅವಳ ಸತ್ತು ಹೋದಳೇ?"

"ಅವಳು ಭಯಂಕರವಾದ ಕೆಟ್ಟ ಕೆಲಸ ಮಾಡಿದಳು."

ನನಗೆ ಅವನ ಮಾತು ಸರಿಯಾಗಿ ಅರ್ಥವಾಗಲಿಲ್ಲ ನನ್ನ ಮನಸ್ಸು ಗೊಂದಲದಲ್ಲಿ ಬಿತ್ತು. ಅವಳ ಗತಿ ಏನಾಯಿತೆಂಬುದನ್ನು ಅರಿಯಲು ನನ್ನ ಮನಸ್ಸು ಕಾತರಗೊಂಡಿತು. ಅಂತಹ ನಿರ್ಮಲ ಮನಸ್ಸಿನ ಮುಗ್ಧೆಗೆ ಕೆಟ್ಟ ಚಾಳಿಯೆಂದರೆ ನನಗೊಂದು ಒಗಟಿನಂತೆ ಭಾಸವಾಯಿತು. ನಾನು ಹೆಚ್ಚಿನ ಆವೇಗದಿಂದ "ಹರಿಬಾಬಾ ಅವಳಿಗೆ ಏನಾಯಿತೆಂಬುದನ್ನು ಹೇಳು" ಎಂದು ಕೇಳಿದೆ.

"ಬೇಡ ಸ್ವಾಮಿ! ಆ ವಿಷಯವನ್ನು ನನ್ನಿಂದ ಹೇಳಿಸಬೇಡಿ."

"ಅದೇಕೆ? ನಿಜಾಂಶವನ್ನು ನೀನು ಹೇಳಲೇ ಬೇಕು."

"ಅವಳು ರಾಜನ ಮನೆಯಲ್ಲಿ ಕಳವು........"

"ಕಳವು! ಅವಳು! ಏನನ್ನು ಕಳವುಮಾಡಿದ್ದಳು?"

"ನಿಮ್ಮದಾದ ಒಂದು ಮಹತ್ವದ ವಸ್ತುವನ್ನು."

"ನನ್ನದೇ? ಅದಾವ ವಸ್ತು?"

"ಅದೇ ಮಹಾಸ್ವಾಮಿ! ಮಹಾರಾಜರು ನಿಮಗೆ ಕಾಣಿಕೆಯಾಗಿತ್ತ ಆ ರಟ್ಟಿನ ಪೆಟ್ಟಿಗೆಯನ್ನು ಕಳವು ಮಾಡಿದಳು. ಅದು ಅವಳ ಸ್ವಾಧೀನದಲ್ಲಿದ್ದುದನ್ನು ನಾವು ಕಂಡು ಹಿಡಿದೆವು."

"ಏನು ಅನರ್ಥ! ಆ ಪೆಟ್ಟಿಗೆಯನ್ನು ನಾನೇ ಒಪ್ಪಿ ಅವಳಿಗೆ ಕಾಣಿಕೆಯಾಗಿ ಕೊಟ್ಟುಹೋದೆ. ಇದರಲ್ಲಿ ಕಳವು ಎಲ್ಲಿಬಂತು ಹರಿಬಾಬಾ?" ಎಂದು ಹೆಚ್ಚಿನ ನೋವಿನಿಂದ ಕೇಳಿದೆ.

ನನ್ನ ಮಾತುಗಳಿಂದ ಅವನು ಗಾಬರಿಗೊಂಡು "ಏನು ಅನರ್ಥವಾಯಿತು. ನಾವು ಅವಳನ್ನು ವಿಚಾರಿಸಿದಾಗ ಅವಳು ಸರಿಯಾದ ನಿಜಾಂಶವನ್ನು ಹೇಳಿದಳು. ನೀವು ಇಂತಹ ಬೆಲೆಬಾಳುವ ರತ್ನಖಚಿತ ಪೆಟ್ಟಿಗೆಯನ್ನು ಅವಳಿಗೆ ಕಾಣಿಕೆಯಾಗಿ ಕೊಟ್ಟಿರಲಾರಿರೆಂದು ನಾವು ಭಾವಿಸಿದೆವು. ಮಹಾ

ರಾಜರೂ ಅವಳ ಮಾತನ್ನು ನಂಬಲಿಲ್ಲ. ಆದುದರಿಂದ ಅವಳಿಗೆ ಶಿಕ್ಷೆ ಯಾಯಿತು” ಎಂದು ದುಃಖದಿಂದ ನುಡಿದ.

“ಎಂತಹ ಶಿಕ್ಷೆ” ಎಂದು ಕಾತರದಿಂದ ನಾನು ಕೇಳಿದೆ.

“ಏನೆಂದು ಹೇಳಲಿ? ಅವಳ ಬೆನ್ನಿಗೆ ಉಸುಗಿನ ಚೀಲವನ್ನು ಕಟ್ಟಿ, ನೀವು ಸಂಜೆಯ ಸಮಯದಲ್ಲಿ ಆನಂದದಲ್ಲಿ ಕಳೆಯುತ್ತಲಿದ್ದ ಆ ಸರೋವರ ದಲ್ಲಿ ಅವಳನ್ನು ಕೆಡವಿದರು. ಇನ್ನೇನು ? ಅಲ್ಲಿಗೆ ಅವಳ ಕತೆ ಮುಗಿಯಿತು. ಇನ್ನೆಲ್ಲಿಯ ಚಾಲಿ ?” ಎಂದು ಅಳುವ ದನಿಯಲ್ಲಿ ಮಾತು ಮುಗಿಸಿದ.

ನನಗೆ ದುಃಖ ಉಕ್ಕೇರಿ ಬಂತು. ಹರಿಬಾಬಾನನ್ನು ಅಲ್ಲಿಂದ ತೊಲ ಗೆಂದು ಚೀರಿದೆ! ಅವನು ಗಾಬರಿಗೊಂಡು ಮಾಯವಾದ. ಏಕಾಂತದಲ್ಲಿ ನಾನು ಮನಸಾರೆ ಅತ್ತುಬಿಟ್ಟೆ. ನಾವಿಬ್ಬರೂ ಸೇರಿ ಅನೇಕ ಸಂಜೆಗಳನ್ನು, ಆ ಬಾಲ್ಕನಿಯಲ್ಲಿ ನಿಂತು ಸುಖವಾಗಿ ಕಳೆದ ಹಿಂದಿನ ಸವಿ ದಿನಗಳನ್ನು ನೆನೆಯುತ್ತ ದುಃಖಿಸಿದೆ.

ಆಮೇಲಿಂದ, ಮತ್ತೆ ಬಾಲ್ಕನಿಯಲ್ಲಿ ನಿಂತುಕೊಂಡೆ. ಚಂದಿರನ ಬೆಳಕು ಹರಡಿತ್ತು. ದೂರ, ಬಲು ದೂರದಲ್ಲಿ, ನೀರಿನಲ್ಲಿ ಒಂದು ಎಳೆ ಬಾಲಿಕೆಯ ದೇಹ ತೇಲುತ್ತಿರುವಂತೆ ನನಗೆನಿಸಿತು.

ಅಂದು ರಾತ್ರಿ ನಾನು ಹೇಗೆ ಕಳೆದೆನೋ ಹೇಳಲಾರೆ. ನನಗೆ ನಿದ್ದೆ ಬರಲೇ ಇಲ್ಲ. ಮಾರನೆಯ ದಿನ ರಾಜನು ಬೆಳಗಿನಲ್ಲಿಯೇ ಎಷ್ಟು ತಡೆದರೂ ಅಲ್ಲಿಂದ ಹೊರಟುಬಿಟ್ಟೆ.

ಇಂದಿಗೂ ನನ್ನ ಜೀವನದಲ್ಲಿ ನಾನು ಚಾಲಿಯನ್ನು ಪ್ರೀತಿಸಿದ ರೀತಿ ಯಲ್ಲಿ ಮತ್ತಾವ ಹೆಣ್ಣನ್ನೂ ಪ್ರೀತಿಸಿಲ್ಲ.

— Chali.

# ಕೋರ್ಟಿನಲ್ಲಿ

ಗಾರಿಗೇ ಹಳ್ಳಿಯ ನ್ಯಾಯಾಲಯದಲ್ಲಿ ರೈತರ ಗುಂಪು ಅಂದು ಬಹಳ ಸೇರಿತ್ತು. ಜನರು ಕಿಕ್ಕಿರಿದು ನೆರೆದುದ್ದರಿಂದ ಅವರ ಮೈಬೆವರಿನ ವಾಸನೆ, ಅವರು ತಮ್ಮೊಂದಿಗೆ ತಂದ ಇತರ ಪದಾರ್ಥಗಳ ಕೆಟ್ಟವಾಸನೆ ಕಛೇರಿಯಲ್ಲಿ ತುಂಬಿಕೊಂಡಿತ್ತು. ಅದೊಂದು ಸಣ್ಣ ಕೋಣೆ; ಅದರಲ್ಲಿಯೇ ನ್ಯಾಯಾಧೀಶನ ಆಸನ, ಸಾಕ್ಷಿಗಳು ನಿಲ್ಲುವ ಸ್ಥಳ, ಫಿರ್ಯಾದಿಯೂ ಮುಂತಾದವರು ಅಲ್ಲಿಯೇ ನಿಲ್ಲಬೇಕಿತ್ತು.

ನ್ಯಾಯಾಧೀಶನು ಬಂದವನೇ ತನ್ನ ಹ್ಯಾಟನ್ನು ಟೇಬಲ್ ಮೇಲಿರಿಸಿ, ಅಧಿಕಾರದ ಠೀವಿಯಿಂದ ಎಲ್ಲರನ್ನೂ ಒಂದು ಸಲ ನೋಡಿದ. ಅವನ ನೋಟದಲ್ಲಿ ತಿರಸ್ಕಾರದ ಚಿಹ್ನೆ ಇತ್ತು. ತಾನೇ ಕುಶಲಮತಿಯೆಂಬ ಅಹಂಕಾರ ಅವನನ್ನು ಆವರಿಸಿತ್ತು. ನಿಜವಾಗಿಯೂ ಅವನು ಆ ಜಿಲ್ಲೆಯಲ್ಲಿ ಅತಿ ದಕ್ಷನಾದ ನ್ಯಾಯಾಧೀಶನೆಂದು ಹೆಸರು ಪಡೆದಿದ್ದ. ಕಛೇರಿಯ ಗುಮಾಸ್ತನನ್ನು ಕಂಡು "ಇಂದಿನ ಮೊದಲನೆಯ ಕೇಸಿನ ಜನರನ್ನು ಕರೆಯಿರಿ" ಎಂದ.

ಗುಮಾಸ್ತನು ಎದ್ದುನಿಂತು "ಮದಾಂ ವಿಕ್ಟರ್ ಬಾಸೂಲೇ ಮತ್ತು ಇಸಿಡೋ ಪೇಟೋ" ಎಂದು ಒದರಿದ.

ಓರ್ವ ಸ್ಥೂಲಕಾಯದ ವಯಸ್ಸಾದ ಹೆಂಗಸು ಮುಂದೆ ಬಂದು ನಿಂತಳು. ಅವಳೂರು ಕಾಂಟೀ. ಬಂಗಾರದ ಗಡಿಯಾರದ ಸರಪಳಿ ಅವಳ ಮೇಲಂಗಿಯ ಮೇಲೆ ಜೋತಾಡುತ್ತಿತು. ಕಿವಿಯಲ್ಲಿ ಬೆಲೆಬಾಳುವ ಓಲೆಗಳು ಥಳಥಳಿಸುತ್ತಿದ್ದವು. ಕೈಬೆರಳುಗಳು ಉಂಗುರುಗಳಿಂದ ಅಂದವಾಗಿ ಕಾಣುತ್ತಿದ್ದವು.

ಪರಿಚಯದ ನಗುವಿನಿಂದ ಅವಳನ್ನುದ್ದೇಶಿಸಿ ನ್ಯಾಯಾಧೀಶನು, ''ನಿನ್ನ ಕೇಸಿನ ವಿವರಗಳನ್ನು ತಿಳಿಸು'' ಎಂದು ಹೇಳಿದ. ಆ ಹೆಣ್ಣು ತನ್ನ ಎದುರಾಳಿ

ಗಳು ಕುಳಿತಿದ್ದೆಡೆ ಒಂದುಸಲ ನೋಡಿದಳು. ಅವರಲ್ಲಿ ಇಪ್ಪತ್ತೈದು ವರುಷದ ಯುವಕನು ತನ್ನ ಸುರೂಪಿಣಿಯಾದ ಹೆಂಡತಿ ಮತ್ತು ವಯಸ್ಸಾದ ತಂದೆ ಯೊಂದಿಗೆ ಕುಳಿತಿದ್ದನು. ಈ ಮೂವರನ್ನು ಕೆಟ್ಟ ನೋಟದಿಂದ ನೋಡುತ್ತ ತನ್ನ ಗೋಳಿನ ವಿವರಗಳನ್ನು ಹೇಳತೊಡಗಿದಳು. "ಆ ಯುವಕನನ್ನು ಹದಿ ನೈದು ವರುಷಗಳ ವರೆವಿಗೂ ಸಾಕಿಸಲುಹಿದೆ. ಆವನನ್ನು ಮನುಷ್ಯನನ್ನಾಗಿ ಮಾಡಿದೆ. ತಾಯಿಯಂತೆ ಪೋಷಿಸಿದೆ; ಆರೈಸಿದೆ. ನನ್ನನ್ನು ತೊರೆಯುವುದಿಲ್ಲ ವೆಂದು ಮಾತುಕೊಟ್ಟ ನಂತರ, ಆರುಸಾವಿರ ನಾಣ್ಯಗಳ ಬೆಲೆಯ ನನ್ನ ಆಸ್ತಿಯನ್ನು ಅವನ ಹೆಸರಿನಲ್ಲಿ ಬರೆದು ಕೊಟ್ಟೆ. ಈ ಕೆಟ್ಟ, ತುಂಟ, ದುರ್ಮಾರ್ಗ........"

ಆವಳ ಮಾತನ್ನು ನ್ಯಾಯಾಧೀಶನು ತಡೆದು "ನೀನು ಆವೇಶದಲ್ಲಿ ಮರ್ಯಾದೆ ಮೀರಿ ಹೇಯವಾದ ಮಾತುಗಳನ್ನುಪಯೋಗಿಸಬೇಡ" ಎಂದು ಎಚ್ಚರಿಸಿದ.

"ಕ್ಷಮಿಸಿ, ನನ್ನ ದುಃಖದ ಆವೇಗದಲ್ಲಿ, ನೋವಿನ ಭರದಲ್ಲಿ ಆಡಿದೆ; ಕ್ಷಮಿಸಿ. ಆವನಿಗೆ ನನ್ನ ಆಸ್ತಿ ಸೇರಿದ ಕೂಡಲೇ ನನ್ನನ್ನು ತೊರೆದು ಅಲ್ಲಿ ಕುಳಿತಿರುವ ಆ ಹೇಡಿಯನ್ನು ಮದುವೆಯಾಗಿರುವನು. ನಮ್ಮಿಬ್ಬರ ನಡುವೆ ಆಗಿಹೋದ ಕರಾರುಪತ್ರ ನನ್ನ ಹತ್ತಿರ ಇದೆ. ತಾವಿದನ್ನು ನೋಡಿ, ನನ್ನ ದೇನಾದರೂ ತಪ್ಪಿದ್ದರೆ, ಶಿಕ್ಷಿಸಿ. ಈ ಪತ್ರದ ಪ್ರಕಾರ........" ಎಂದು ನುಡಿ ಯುತ್ತ ತನ್ನ ಕೈಯೊಳಗಿನ ಕಾಗದವೊಂದನ್ನು ನ್ಯಾಯಾಧಿಪತಿಗೆ ಕೊಟ್ಟಳು.

"ಆ ಕಾಗದವು ಸುಳ್ಳು. ಅದು ನಾನು ಬರೆದು ಕೊಟ್ಟಿಲ್ಲ............" ಎಂದು ಇಸಿಡೋರ್ ಪೇಟ್ರೋ ಅಡ್ಡ ಮಾತನಾಡಿದುದಕ್ಕೆ, ಅಧಿಕಾರಿಯು "ನೀನೀಗ ಸುಮ್ಮನಿರು. ನಿನ್ನ ಸರತಿ ಬಂದಾಗ ಎಲ್ಲವನ್ನೂ ಹೇಳುವಿ ಯಂತೆ" ಎಂದು ಹೇಳಿ ಆವಳು ಕೊಟ್ಟ ಕಾಗದವನ್ನೋದಿದ.

"ನನಗೆ ಆಸ್ತಿಯನ್ನು ದಯಪಾಲಿಸಿದ ಮತ್ತು ನನ್ನನ್ನು ಸಾಕಿ ಸಲು ಹಿದ ಮದಾಂ ಬೇಸಿಲೇಯನ್ನು ಎಂದಿಗೂ ತೊರೆಯುವುದಿಲ್ಲವೆಂದು, ಅವಳಲ್ಲಿ ವಿಶ್ವಾಸ ಆದರಗಳಿಂದ ಯಾವಜ್ಜೀವನವೂ ಸೇವೆಮಾಡುವೆ

ನೆಂದು ಒಪ್ಪಿ ಒಮ್ಮನಸ್ಸಿನಿಂದ ಈ ಸಮ್ಮತಿ ಪತ್ರವನ್ನು ಬರದು ಕೊಟ್ಟಿದ್ದೇನೆ."

ಇತಿ—ಇಸಿಡೋ ಪೇಟ್ರೋ; ಎಂದು ಆ ಪತ್ರದ ವಿವರವಿತ್ತು.

**ನ್ಯಾಯಾಧೀಶ:**– ಕೆಳಗೆ ನಿನ್ನ ಸಹಿ ಇಲ್ಲವಲ್ಲ. ನಿನಗೆ ಓದುಬರಹ ಬರುವುದಿಲ್ಲವೇ?

**ಇಸಿಡೋ:**– ಇಲ್ಲ.

**ನ್ಯಾಯಾ:**– ಇಲ್ಲಿ ಕೆಳಗೆ ಈ ಗೆರೆಗಳನ್ನು ಯಾರು ಗೀಚಿರುವರು?

**ಇಸಿಡೋ:**– ನನಗೆ ತಿಳಿಯದು ಸ್ವಾಮಿ.

**ನ್ಯಾಯಾ:**– ಇದು ಯಾರ ಕೆಲಸ?

**ಇಸಿಡೋ:**– ಅವಳದೇ ಆ ಕೆಲಸ.

**ನ್ಯಾಯಾ:**– ದೇವರ ಆಣೆಯಿಟ್ಟು ಇದು ನಿನ್ನ ಕೆಲಸವಲ್ಲವೆಂದು ಹೇಳುವಿಯಾ?

**ಇಸಿಡೋ:**– ನಾನು ನಂಬಿರುವ ದೇವರ ಹೆಸರಿನಲ್ಲಿ, ನನ್ನನ್ನು ಹೆತ್ತು, ಸಾಕಿ, ಸಲುಹಿದ ತಂದೆ, ತಾಯಿ, ಮತ್ತು ನಮ್ಮ ಮನೆತನದವರ ಆಣೆಯಾಗಿ ಹೇಳುತ್ತೇನೆ. ನಾನು ಈ ಹೆಂಗಸಿಗೆ ಈ ಬಗೆಯ ಪತ್ರವನ್ನು ಬರೆದು ಕೊಟ್ಟಿಲ್ಲ.

ನ್ಯಾಯಾಧೀಶನು ಎತ್ತರ ಸ್ವರದಲ್ಲಿ, ಆ ಯುವಕನು ನಟನಂತೆ ಆವೇಶದಿಂದ ಕುಣಿಕುಣಿದು ಆಡುವ ಮಾತುಗಳನ್ನು ಕೇಳಿ ನಸುನಕ್ಕು, "ಈ ಮುದುಕಿಯೊಂದಿಗೆ ನಿನ್ನ ಸಂಬಂಧ ಯಾವ ಬಗೆಯದಾಗಿತ್ತು" ಎಂದು ಕೇಳಿದ.

ಅವನು ತಲೆತಗ್ಗಿಸಿಕೊಂಡು ನಿಂತು, ಮೆಲ್ಲಗೆ "ಅವಳಿಗೆ ಸಂತೋಷವಾಗುವಂತೆ ವರ್ತಿಸುತ್ತಿದ್ದೆ" ಎಂದು ಹೇಳಿದ.

**ನ್ಯಾಯಾ:**– ನಿನ್ನ ಈ ಮಾತುಗಳಿಂದ ಅವಳು ಅನೀತಿವಂತಳೆಂದು ಅರ್ಥವಾಗುತ್ತದೆ. ಆದರೆ ಅವಳು ನಿನ್ನನ್ನು ತಾಯಿಯಂತೆ ಪೋಷಿಸುತ್ತಿದ್ದಳೆಂಬುವುದು ಸುಳ್ಳೇನು?

ಇಸಿಡೋರನ ತಂದೆ (ಎದ್ದುನಿಂತು):– ಅವನ ವಯಸ್ಸು ಇನ್ನೂ ಹದಿನೈದು ಇರುವಾಗಲೇ ಈ ಒಂಸಿ ಹೆಣ್ಣು ನನ್ನ ಮಗನನ್ನು ನೀಚ ಕೆಲಸಕ್ಕೆ ಎಳೆದಳು, ಸ್ವಾಮೀ.

**ನ್ಯಾಯಾ:–** ಏನು ಅವಳೇ ಇವನನ್ನು ಕೆಡಿಸಿದಳೇ ?

ಇ. ತಂದೆ:– ಆಹುದು. ನನ್ನ ಮಗನಿನ್ನೂ ಸಣ್ಣವನು. ಏನೂ ತಿಳಿಯದು. ಹನ್ನೊಂದು ವರ್ಷದವನಿದ್ದಾಗಿನಿಂದಲೂ ಅವನನ್ನು ಚೆನ್ನಾಗಿ ಕೊಬ್ಬುವಂತೆ ಬೆಳೆಸಿದಳು. ಅವನಿಂದ ತನ್ನ ಕಾಮದಾಹವನ್ನು ತಣಿಸಲು ಯತ್ನಿಸಿದಳು. ಪೂರ್ಣ ಸುಖವನ್ನೂ ಪಡೆದಳು. ಎಲ್ಲಿಯ ವರೆಗೆ ಇವನಿಗೆ ತನ್ನ ಕೆಲಸದ ಬಗ್ಗೆ ಏನೆಂಬ ಜ್ಞಾನ, ಮತ್ತು ಎಚ್ಚರವಿರಲಿಲ್ಲವೋ ಅಲ್ಲಿಯ ವರೆಗೆ ಅವನಿಂದ ಲಾಭ ಪಡೆದಳು. ಇವನಿಗೆ ತಾನು ಮಾಡುತ್ತಿದ್ದ ಕೆಲಸ ಪಾಪಕರವೆಂದು ತಿಳಿದು ಬಂದಕೂಡಲೇ ಇವಳಿಂದ ದೂರಸರಿದು ನಿಂತ. ಇದು ನಿಜವಾದ ವಿಷಯ. ಬಹಿರಂಗವಾಗಿ ನಿರ್ಭಿಡೆಯಿಂದ ಇವಳವರ್ತನೆಯ ರಹಸ್ಯವನ್ನು ತಮ್ಮೆದುರು ಹೇಳಿದುದಕ್ಕೆ ಕ್ಷಮಿಷಬೇಕಾಗಿ ಬೇಡುತ್ತೇನೆ.

**ನ್ಯಾಯಾ:–** ಈಗ ನಿಮಗೇನುಬೇಕು? ನನ್ನಿಂದ ನಿಮಗೇನು ಕೆಲಸ ?

**ಇ. ತಂದೆ:–** ಅವನನ್ನು ಸರ್ವಸಮಯದಲ್ಲಿ ಕಾಮಕ್ರೀಡೆಗಾಗಿ ಉಪಯೋಗಿಸಿ, ಅವನ ಶಕ್ತಿಯೆಲ್ಲವನ್ನೂ ಹೀರುತ್ತಿರುವಳು. ಆಸ್ತಿಕೊಟ್ಟು ಅವನನ್ನು ಬೆದರಿಸುತ್ತಿರುವಳು. ಈ ಬಗೆಯ ವರ್ತನೆಯಿಂದ ನನ್ನ ಮಗನ ಜೀವನವೇ ಹಾಳಾಗಬಹುದು. ಅವನನ್ನು ನಮ್ಮ ವಶಕ್ಕೆ ಕೊಡಿಸುವುದೇ ನಿಮ್ಮ ಕೆಲಸವಾಗಿದೆ. ದಯಮಾಡಿ........

**ಮಾದಾಂ ಬಾಸಿಲೇ:–** ಇವರ ಮಾತೆಲ್ಲ ಸುಳ್ಳು. ಅವನು ಮನುಷ್ಯನಾಗುವಂತೆ ಮಾಡಿದುದು ನಾನೇ. ನನ್ನ ಉಪಕಾರವನ್ನು ಇವರೆಲ್ಲರೂ ಮರೆತಿರುವರು. ಅಲ್ಲಿ ನನ್ನ ಆಸ್ತಿ ಹೋಯಿತು. ಇಲ್ಲಿ ನನ್ನ ಮಾನವೂ ಹೋಯಿತು.

ಇಸಿಡೋ:– ಇವಳ ಮಾತು ಸುಳ್ಳು. ಐದುವರುಷಗಳ ಹಿಂದೆ [ಆಗ ನನ್ನ ವಯಸ್ಸು ೨೦] ಇವಳ ಸಹವಾಸದಿಂದ ದೂರಾಗಬೇಕೆಂದು ಯತ್ನಿಸಿದೆ

ಇದರ ಕಾರಣ ಇವಳ ವಯಸ್ಸು ಮತ್ತು ಕೊಬ್ಬಿದ ದೇಹ. ನಾನು ಹೋಗುವೆನೆಂದು ಹಟಹಿಡಿದೆ; ಆಗ ಇವಳು ಅತ್ತು, ಕರೆದು, ತನ್ನ ಆಸ್ತಿಯನ್ನು ಕೊಡುವೆನೆಂದು ಹೇಳಿದಳು. ಕೇವಲ ಐದು ವರ್ಷಗಳ ವರೆಗೆ ಇರಬೇಕೆಂದು ಬೇಡಿಕೊಂಡಳು. ನಿರ್ವಾಹವಿಲ್ಲದೆ ಒಪ್ಪಿಕೊಂಡೆ. ರಾತ್ರಿ, ಹಗಲು, ಗಂಟೆ ಗಂಟೆಗಟ್ಟಲೆ, ಆವಳ ಸಹವಾಸದಲ್ಲಿ ಯಮಯಾತನೆಯಂತೆ ಈ ಐದು ವರ್ಷಗಳನ್ನು ದುಃಖದಿಂದ ಕಳೆದೆ. ಈಗ ನನಗೆ ಪೂರ್ಣ ಸ್ವಾತಂತ್ರ್ಯ ದೊರೆತಿದೆ. ಮಾಡಿಕೊಂಡ ಕರಾರು ಮುಗಿಯಿತು. ಮಾತಿನಂತೆ ನಡೆದುಕೊಂಡೆ. ಈಗ ಆಸ್ತಿ ನನ್ನದು. ನನ್ನ ಮನಸ್ಸಿಗೆ ಬಂದ ಸಮವಯಸ್ಸಿನ ಹೆಣ್ಣಿನೊಂದಿಗೆ ಮದುವೆಯಾಗಿ ಸುಖವಾಗಿರುವುದು ತಪ್ಪೇ ? [ಈ ಮಾತು ಕೇಳಿ ಮದಾಂ ಬಾಸಿಲೇ ಕುರ್ಚಿಯ ಮೇಲೆ ಕುಸಿದು ಬಿದ್ದಳು]

ನ್ಯಾಯಾ:- ಮಡಾಂ ಬಾಸಿಲೇ! ಕೇಸು ನನ್ನ ಕೈಮೀರಿ ಹೋಗಿದೆ. ಈಗ ನಿನ್ನ ಮಾತಿನಂತೆ ಇಸಿಡೋ‌ ಸರ್ವ ಸ್ವತಂತ್ರನು. ಹತಾಶಳಾಗಬೇಡ. ನಿನ್ನ ಮನೋವ್ಯಾಕುಲತೆಯೇ ಇದಕ್ಕೆ ಸಾಕ್ಷಿ. ನನ್ನೆದುರು ನೀನು ಕುಸಿದು ಬಿದ್ದುದೇ ತಪ್ಪು ನಿನ್ನದೆಂದು ಸಾರುತ್ತದೆ. ಈಗ ಆಸ್ತಿಯ ಒಡೆಯ ಅವನು. ಅವನು ಮನಬಂದಂತೆ ವರ್ತಿಸುವನು. ಅವನನ್ನು ತಡೆಯಲು ನಿನಗೆ ಅಧಿಕಾರವಿಲ್ಲ. ಕಾನೂನು ನಿನಗೆ ವಿರುದ್ಧವಾಗಿದೆ. ಇಲ್ಲಿ ನೋಡು, ಇಂತಹ ಹುಚ್ಚು ಕೆಲಸಗಳನ್ನು ಮಾಡಿ ಕೈಯಲ್ಲಿಯ ಆಸ್ತಿಯನ್ನು ಕಳೆದುಕೊಳ್ಳಲು ಯತ್ನಿಸಬೇಡ. ಹುಡುಗರ ಜೀವನವನ್ನು ಹಾಳುಮಾಡಬೇಡ. ನೀನಿನ್ನು ಹೋಗಬಹುದು. [ಅವಳು ದುಃಖಿಸುತ್ತ ಹೋಗುವಳು]

"ಇದು ಮುಗಿಯಿತು. ಮತ್ತೊಂದು ಕೇಸಿನ ಜನರನ್ನು ಕರೆಯಿರಿ." ಎಂದು ನ್ಯಾಯಾಧೀಶನು ತನ್ನ ಗುಮಾಸ್ತನಿಗೆ ಸೂಚಿಸಿದ.

— In the Court Room.

# ವಿಚಿತ್ರ ಅನುಭವ

ಹೆಣ್ಣು ಒಂದು ವಸ್ತುವಿನಲ್ಲಿ ಉತ್ಸುಕತೆ ತೋರಿದಳೆಂದರೆ ಮುಗಿಯಿತು. ಆ ಉತ್ಸುಕತೆಯಲ್ಲಿ ತನ್ನ ಕಾರ್ಯವನ್ನು ಸಾಧಿಸಲು ಏನನ್ನಾದರೂ ಮಾಡಲು ಹಿಂಜರಿಯುವದಿಲ್ಲ. ನೋಡುವದಕ್ಕೆ ಶಾಂತಸ್ವಭಾವಿಗಳಂತೆ ಕಾಣುವಳು. ಆದರೆ ಆ ಶಾಂತತೆಯ ಹಿಂದೆ, ಅದೇ ಹಿನ್ನೆಲೆಯಲ್ಲಿ ಅವಳು ತನ್ನ ಕಾರ್ಯವನ್ನು ಸವಿಮಾತುಗಳಿಂದಲೂ, ಪ್ರೇಮ ಮತ್ತು ಆದರದ ನೋಟದಿಂದಲೂ, ಸಮ್ಮೋಹನಾಸ್ತ್ರದಿಂದಲೂ, ಸಾಧಿಸುವಳು. ಹೀಗೆ ಮಾಡುವಾಗ ಹೆಣ್ಣು ಬಹು ಎಚ್ಚರದಿಂದಲೂ, ಜಾಗರೂಕತೆಯಿಂದಲೂ, ವರ್ತಿಸುವದರಿಂದ ಗಂಡುಸಾದವನು ಈ ಮೋಸವನ್ನು ಮತ್ತು ಹೆಣ್ಣಿನ ಸುಳ್ಳುವರ್ತನೆಯ ರೀತಿಯನ್ನು ಸಹಿಸದೆ ಆತ್ಮಹತ್ಯೆಯ ಮಾರ್ಗವನ್ನು ಕೆಲವೊಂದು ವೇಳೆ ಹಿಡಿಯುವನು.

ಈಗ ನಾನು ವಿವರಿಸುವ ಹೆಣ್ಣಿನ ಚಿತ್ರ ಇದೇ ರೀತಿಯದು. ನನ್ನ ಈ ಕಥಾನಿರೂಪಣೆ ಆರಂಭವಾಗುವಾಗ ಆ ಸ್ತ್ರೀ ಬಹು ಮರ್ಯಾದಸ್ಥಳಾಗಿಯೇ ಇದ್ದಳು. ಅವಳ ಎರಡು ಮಕ್ಕಳು–ತನ್ನ ಗಂಡನೊಂದಿಗೆ, ಆನಂದದಿಂದ ಇದ್ದಳು. ಇದು ಹೊರಗಿನವರಿಗೆ ಮಾತ್ರ. ಅವಳು ಹಳ್ಳಿಯಲ್ಲಿರುವಾಗ ನಗರದ ಸ್ಫೂರ್ತಿದಾಯಕ ಜೀವನದ ಮತ್ತು ಅತಿ ಕಾಮುಕ ಜೀವನದ ಕತೆಗಳನ್ನು ಪತ್ರಿಕೆಗಳ ಮೂಲಕ ತಿಳಿದು ಬಲು ಹಿಗ್ಗುತ್ತಿದ್ದಳು. ತಾನು ಸಹ ಅಂತಹ ಜೀವನದಲ್ಲಿಯ ಸುಖವನ್ನು ಕಾಣಬೇಕೆಂಬ ಹಂಬಲ ಅವಳದಾಗಿತ್ತು. ದೈನಂದಿನ ಪತ್ರಿಕೆಗಳಲ್ಲಿ ಬರುವ ಸುಂದರ ಪುರುಷರ ಚಿತ್ರಗಳನ್ನು ಕಂಡು, ಅವರ ಸಹವಾಸದಲ್ಲಿ ಆಗುವ ಆನಂದವನ್ನು ಕನಸಿನಲ್ಲಿಯೇ ನೆನೆಯುತ್ತಿದ್ದಳು. ಅಲ್ಲಿಯ ಸುಂದರ ಉದ್ಯಾನವನಗಳ ಚಿತ್ರಗಳನ್ನು, ಅಲ್ಲಿ ನೆರೆಯುತ್ತಿದ್ದ ಹೊಸ ವಿಲಾಸ–ವಿಲಾಸಿಸಿಯರನ್ನು, ಇತರ ಕಾಮುಕ ದೃಶ್ಯಗಳ ಆನಂದವನ್ನು ಅವಳು ಕನಸ್ಸಿನಲ್ಲಿಯೇ ಕಾಣುತ್ತಿದ್ದಳು.

ಈ ಬಗೆಯ ಕನಸುಗಳು ಅವಳ ಜೀವನದಲ್ಲಿ ಒಂದು ಬಗೆಯ ಜಿಗಪ್ಸೆಯನ್ನುಂಟುಮಾಡಿತ್ತು. ಮಾನವಳಾಗಿ ಜನಿಸಿ, ತಾನು ಅನುಭವಿಸಬೇಕಾದ ಸುಖಗಳನ್ನು ಕಾಣದೆ ಸುಮ್ಮನೇ ಪರಂಪರಾಗತವಾಗಿ ನಡೆದು ಬಂದ ಹಳ್ಳಿಯ ಜೀವನದಲ್ಲಿಯೇ ತನ್ನ ಆಯುಷ್ಯವನ್ನು ಕಳೆಯುತ್ತಿರುವೆನೆಂದು ಅವಳು ದಿನೇ ದಿನೇ ನಿರಾಶಳಾಗುತ್ತಿದ್ದಳು. ಅವಳು ಸುಂದರಿ; ಹಳ್ಳಿಯ ಜೀವನದ ಪರಿಣಾಮದಿಂದ ಅವಳು ಆರೋಗ್ಯಶಾಲಿಯಾಗಿದ್ದಳು. ಆದರೆ, ನಗರದ ಯುವತಿಯರು ಕಾಣುತ್ತಲಿರುವ ಸುಖ-ಭೋಗಗಳನ್ನು ವಿಲಾಸದ ಸುಖ ಜೀವನವನ್ನು ತಾನು ಕಾಣುತ್ತಿರಲಿಲ್ಲವೆಂದು ಅವಳು ಕೊರಗುತ್ತಿದ್ದಳು. ಅಂತೂ ಒಂದು ದಿನ ಪ್ಯಾರಿಸ ನಗರದ ಭವ್ಯ ಜೀವನದ ಸವಿಯನ್ನು ಅನುಭವಿಸಿಯೇ ತೀರಬೇಕೆಂದು ಅವಳು ನಿಶ್ಚಯಿಸಿದಳು.

ಕೆಲವು ಪ್ಯಾರಿಸದ ಮಿತ್ರರಿಂದ ಬಲವಂತದ ಆಮಂತ್ರಣವನ್ನು ಬರಮಾಡಿಕೊಂಡು ಪ್ಯಾರಿಸಕ್ಕೆ ಪ್ರಯಾಣ ಬೆಳೆಸಿದಳು. ಆವಳ ಯಜಮಾನನಿಗೆ ಕೆಲಸವಿದ್ದುದರಿಂದ ಒಬ್ಬಳೇ ಹೊರಡಬೇಕಾಯಿತು. ಅಲ್ಲಿ ಯಾರ ಮಿತ್ರರ ಮನೆಗೆ ಹೋಗದೇ ಕೆಲದಿನ ಹೋಟೆಲಿನಲ್ಲಿ ಉಳಿದು, ಕೆಲಸವಿದೆಯೆಂದು ಹೇಳಿ ಕೆಲಸಮಯ ಪ್ಯಾರಿಸದಲ್ಲಿಯೇ ಇದ್ದಳು. ಆ ಊರಲ್ಲಿದ್ದ ಬಂಧು-ಗಳ ನೆರವಿನಿಂದ ಈ ವಿಲಾಸ ನಗರದ ಶ್ರೀಮಂತರ, ಅಲ್ಲದೆ ಹೆಸರಾದ ನಟರ ನಟಿಯರ ಪರಿಚಯ, ಮತ್ತು ನೃತ್ಯ ಪಾರ್ಟಿಗಳಲ್ಲಿ ಭಾಗವಹಿಸುವ ಅವಕಾಶ ಅವಳಿಗೆ ಆಗಲಿಲ್ಲ. ಪ್ಯಾರಿಸದ ಜೀವನದಲ್ಲಿ ಆವಳಿಗೆ ತನ್ನ ಹಳ್ಳಿಯ ಜೀವನಕ್ಕಿಂತಲೂ ಹೆಚ್ಚಿನೇನೂ ಕಾಣಿಸಲಿಲ್ಲ. ನಿರಾಶೆಯಿಂದ ಅವಳು ಇನ್ನೇನು ಎಂದು ತನ್ನೂರಿಗೆ ಹಿಂತಿರುಗುವುದರಲ್ಲಿದ್ದಳು.

ಒಂದು ಸಂಜೆ ವಸ್ತು ಶಿಲ್ಪಿಗಳ ಸಂಗ್ರಹಾಲಯದ ಮುಂದೆ ಜನರ ಸಂದಣಿ ಹೆಚ್ಚು ಇತ್ತು. ಅದರ ಒಡೆಯನು ಒಂದು ಹಳೆಯ ಜಪಾನದ ಶಿಲ್ಪವನ್ನು ತನ್ನ ಕೈಯಿಂದ ತೋರಿಸುತ್ತ ಆದೊಂದು ಉತ್ತಮ ಕಲಾಕೃತಿಯೆಂದು ಆದರ ಬೆಲೆ ಕಲಾವಿದ ಮತ್ತು ಸಾಹಿತ್ಯ ಪ್ರಿಯರಿಗೆ ಮಾತ್ರ ತಿಳಿಯುವುದೆಂದು ಅವನು ಹೇಳುತ್ತ ಅಲ್ಲಿ ನಿಂತಿದ್ದ ಶ್ರೀಯುತ ವಾರೇ (Monsieur Varin) ರ ಮುಂದೆ ಆದನ್ನು ಕೇವಲ ಸಾವಿರ ಫ್ರ್ಯಾಂಕು

ಗಳಿಗೆ ಕೊಡುವೆನೆಂದು ಹೇಳಿದ. ಹೆಸರಾಂತ ಸಾಹಿತಿಗಳಾದ ಝೋಲಾ ಮುಂತಾದವರಾಗಿದ್ದರೆ ಅದನ್ನು ೨೦೦೦ ಫ್ರಾಂಕುಗಳಿಗೆ ತೆಗೆದು ಕೊಳ್ಳುತ್ತಿದ್ದ ರೆಂದು ಆ ಕಲಾಕೃತಿಯನ್ನು ಹೊಗಳಿದ.

ವಾರೇಗೆ (ಅವನೋರ್ವ ಸಾಹಿತಿ) ಆ ಶಿಲ್ಪ ಬೇಕಿತ್ತು. ಅವನ ಆತು ರದ ಕಣ್ಣುಗಳು ಆ ಕಡೆ ಸಾರಿದವು. ಇದನ್ನು ಕಂಡು ಅಂಗಡಿಕಾರನು ಎತ್ತಿದ ಸ್ವರದಲ್ಲಿ "ಇಲ್ಲಿ ನಿಂತಿರುವ ಪ್ರಸಿದ್ಧ ಸಾಹಿತಿಯಾದ ಶ್ರೀಯುತ ವಾರೇ ಯವರು ಇದನ್ನು ಒಂದು ಸಾವಿರ ಫ್ರಾಂಕುಗಳಿಗೆ ಬೇಡುತ್ತಿರುವರು. ಇದೊಂದು ದಿವ್ಯ ಶಿಲ್ಪ. ಇಂತಹ ಅತ್ಯುತ್ತಮ ಕಲಾಕೃತಿಯನ್ನು ಇಷ್ಟು ಸ್ವಲ್ಪ ಬೆಲೆಗೆ ಯಾರೂ ಪಡೆಯಬಹುದು. ಝೋಲಾನೆ ಇಲ್ಲಿ ಇದ್ದಿದ್ದರೆ ೨೦೦೦ ಫ್ರಾಂಕುಗಳಿಗೆ ಸಂತೋಷದಿಂದ ಪಡೆಯುತ್ತಿದ್ದ" ಎಂದ. ದೂರ ದಲ್ಲಿದ್ದ ಈ ಸ್ತ್ರೀ ಇವನ ಹೆಸರನ್ನು ಕೇಳಿದ್ದಳು. ಈ ಸನ್ನಿವೇಶದ ಮೂಲಕ ಇವನ ಪರಿಚಯ ಮಾಡಿಕೊಳ್ಳುವುದೆಂದು ನಿಶ್ಚಯಿಸಿದಳು. ಜನ ಸಂದಣಿ ಯಲ್ಲಿ ಅವಸರದಿಂದ ಮುಂದರಿದು ಬಂದು: "ಅಂಗಡಿಕಾರನೇ, ಈ ಶಿಲ್ಪ ವನ್ನು ನನಗಾದರೆ ಎಷ್ಟು ಬೆಲೆಗೆ ಕೊಡುವೆ?" ಎಂದು ಕೇಳಿದಳು. ೧೫೦೦ ಫ್ರಾಂಕುಗಳಿಗೆ ಆದನ್ನು ಕೊಡುವನೆಂದು ಅವನಿಂದ ಮಾರುತ್ತರ ಬರಲು ಯೋಚನೆ ಇಲ್ಲದೆ ಆ ಸಾಹಿತಿಯನ್ನುದ್ದೇಶಿಸಿ ''ಮಹಾಶಯರೇ, ತಮ್ಮ ಖ್ಯಾತಿ, ಪರಿಚಯ,ನಿಮ್ಮ ಕಲಾಪ್ರೀತಿ ಎಲ್ಲವನ್ನು ನಾನು ಕೇಳಿ ಅರಿತಿರುವೆನು. ನಿಮ್ಮಂತಹ ವಿಖ್ಯಾತರಿಗೆ ನನ್ನ ಪ್ರೇಮದ ಕಾಣಿಕೆಯೆಂದು ಇದನ್ನು ಸ್ವೀಕರಿಸಿರಿ" ಎಂದು ಹೇಳಿದಳು. ಈ ವಿಚಿತ್ರ ಸಂಘಟನೆಯನ್ನು ಕಂಡು ಜನರೆಲ್ಲರೂ ಬೆರಗಾದರು. ಒಂದೆರಡು ನಿಮಿಷಗಳಲ್ಲಿ ಇವರಿಬ್ಬರೂ ಚಿರಪರಿ ಚಿತರಾದವರಂತೆ ವರ್ತಿಸುವುದನ್ನು ಕಂಡು ನೆರೆದ ಜನರು ಇವಳ ಅದೃಷ್ಟವನ್ನು ಕೊಂಡಾಡಿದರು. ಈ ಹಳ್ಳಿಯ ಹುಡುಗಿಗೆ ತಾನು ಇಂತಹ ಸ್ತುತ್ಯಕಾರ್ಯ ಮಾಡಿದೆನೆಂಬ ಹೆಮ್ಮೆ.

ಆ ಸಾಹಿತಿ ಇವಳ ಕಾಣಿಕೆಗೆ ಅಚ್ಚರಿಗೊಂಡು ತನಗೆ ಈ ಕಾಣಿಕೆ ಬೇಡೆಂದ. ಆದರೆ ಅವಳು ಅಂಗಡಿಯವನಿಂದ ಇವನ ಮನೆಯ ವಿವರವನ್ನು ತಿಳಿದು ಆ ಶಿಲ್ಪವನ್ನು ಪಡೆದುಕೊಂಡು ಕುದುರೆಗಾಡಿಯನೇರಿದಳು. ಬರೆಹ

ಗಾರ ವಾರೇನನು ನಿರ್ವಾಹವಿಲ್ಲದೆ ಅವಳೊಂದಿಗೆ ಕುದುರೆಗಾಡಿಯಲ್ಲಿ ತನ್ನ ಮನೆಗೆ ನಡೆದ. ಗಾಡಿಯಲ್ಲಿ ತೀರ ಹತ್ತಿರ ಕುಳಿತಿರುವಾಗ ಅವನಿಗೆ ತನ್ನ ಚರಿತ್ರೆಯೆಲ್ಲವನ್ನು ಹೇಳುತ್ತ, ಆ ಶಿಲ್ಪವನ್ನು ತೆಗೆದುಕೊಳ್ಳಬೇಕೆಂದು ಮತ್ತೆ ಒತ್ತಾಯಪಡಿಸಿದಳು. ಅವನು ಬೇಡೆಂದ. "ಹಾಗಾದರೆ ನೀವು ಇಂದೆಲ್ಲ ನಾನು ಹೇಳಿದಂತೆ ಮಾಡುವುದಾದರೆ ಈ ಶಿಲ್ಪವನ್ನು ನನ್ನಲ್ಲಿಯೇ ಇಟ್ಟುಕೊಳ್ಳುವೆನು'' ಎಂದಳು.

ಇದಕ್ಕೆ ಅವನ ಸಮ್ಮತಿ ದೊರೆಯಿತು. ಆಗ ಸಂಜೆ ಐದರ ಸಮಯ ಆ ಹೆಣ್ಣು ಈ ಸಮಯದಲ್ಲಿ ದಿನದ ನಿಮ್ಮ ಸಾಮಾನ್ಯ ಕಾರ್ಯಕ್ರಮವೇನು" ಎಂದು ವಿಚಾರಿಸಿದಳು. "ಗಾಳಿ ವಿಹಾರವೇ ಸುಖವಾದ ಕೆಲಸ" ಎಂದ. "ಹಾಗಾದರೆ ನಾವೂ ಕೊಂಚ ಸಂತೋಷದಿಂದ ವಿಹರಿಸಿ ಬರುವ" ಎಂದು ಸೂಚಿಸಿ ಮನೆಯಲ್ಲಿ ಆ ವಿಗ್ರಹವನ್ನಿರಿಸಿ, ಅಡ್ಡಾಡಲು ಹೊರಟರು. ಆಗ ಆ ಕಲಾವಿದನು ತನ್ನೆಲ್ಲ ಮಿತ್ರರ ಪರಿಚಯ ಮಾಡಿಕೊಟ್ಟ. ಅವರ ನಿಕಟ ಪರಿಚಯದಿಂದ ತಾನೂ ಓರ್ವ ಶ್ರೀಮಂತಳೆಂಬ ಹೆಮ್ಮೆ ಅವಳಿಗಾಯಿತು. ಕೆಲ ಸಮಯದ ನಂತರ ಪಾನೀಯದ ಅಂಡಿಗೆ ಹೋಗಿ, ಉತ್ತಮ ದರ್ಜೆಯ ಪಾನೀಯವನ್ನು ಸೇವಿಸಿದರು. ಹೀಗೆ ಅವರು ಬಹಳ ಹೊತ್ತು ಕಳೆದರು. ಆ ಪಾನೀಯದ ಅಂಗಡಿಗೆ ವಿಹಾರವನ್ನು ಮುಗಿಸಿಕೊಂಡು ಬರುವ ಶ್ರೀಮಂತ ಮಿತ್ರರ ಪರಿಚಯವನ್ನು ಈತನು ಇವಳಿಗೆ ಮಾಡಿಕೊಟ್ಟನು. ಅವರೆಲ್ಲರೆದುರು ಇಲ್ಲದ ಸಲುಗೆಯನ್ನು ವಹಿಸಿ ಈ ಹೆಣ್ಣು ತನ್ನ ಹಳ್ಳಿಯ ಪರಮ ಮಿತ್ರಳೆಂದೂ ತನ್ನ ಸಾಹಿತ್ಯಕೃತಿಗಳಿಗೆ ಪ್ರೇರಕಳೆಂದು ಹೇಳಿದ. ರಾತ್ರಿ, ಒಂದು ಉತ್ತಮವಾದ ಹೋಟಲಿನಲ್ಲಿ ಭವ್ಯವಾದ ಭೋಜನವನ್ನು ಇಬ್ಬರೂ ಮುಗಿಸಿದರು. ಊಟದಸಮಯದಲ್ಲಿ ಆ ಊರ ಶ್ರೀಮಂತ ದಂಪತಿಗಳ ಪರಿಚಯವು ಆದುದು ಈ ಹಳ್ಳಿಯ ಹೆಣ್ಣಿಗೆ ಸ್ವರ್ಗದ ಅನುಭವದಂತಾಯಿತು. ಮುಂದೆ ಊಟವಾದ ನಂತರ ನಾಟಕವನ್ನು ನೋಡಬೇಕೆಂದು ಅವಳು ಸೂಚಿಸಿದುದರಿಂದ, ಸಾಹಿತಿಯ ನೆರವಿನಿಂದ ಆ ಊರ ಅತ್ಯಂತ ಪ್ರಸಿದ್ಧ ನಾಟಕ ಗೃಹದಲ್ಲಿ ಪ್ರವೇಶ ದೊರೆಯಿತು. ಇದೊಂದು ದಿವ್ಯ ಇಂದ್ರಭವನವೆಂದು ಆ ಹೆಣ್ಣಿಗನಿಸಿತು. ಅಲ್ಲಿ ನೆರೆದ ಅನೇಕ ಕಲಾವಿದರ ಪರಿಚಯವೂ ಆಯಿತು.

ಇನ್ನೇನು ನಾಟಕ ಮುಗಿಯಿತು. ಇವಳ ಕಾಟ ತಪ್ಪಬಹುದೆಂದು ಈ ರಸಿಕ ಬರಹಗಾರನು ಭಾವಿಸಿದ. ಆದರೆ ಅವಳು ಅಂದು ರಾತ್ರಿ ತನ್ನ ಮನೆಯಲ್ಲಿಯೇ ಕಳೆಯುವೆನೆಂದು ಹೇಳಿದುದರಿಂದ ನಿರ್ವಾಹವಿಲ್ಲದೆ, ಅವಳನ್ನು ತನ್ನ ಮನೆಗೆ ಕರೆದುಕೊಂಡು ಹೋದ. ಅವನಲ್ಲಿ ಆ ರಾತ್ರಿ ಸುಖವಾಗಿ ಕಳೆದಳು.

ಮಾರನೆಯ ದಿನ ಮುಂಜಾನೆ ಬೇಗ ಎದ್ದು, ತನ್ನ ಅರಿವೆಗಳನ್ನು ಹಾಕಿಕೊಂಡು ಅಲಂಕಾರ ಮುಗಿಸಿದಳು. ಆ ಬರಹಗಾರನು ಹೊತ್ತಾದರೂ ಮಲಗಿ ನಿದ್ರಿಸುವುದನ್ನು ಕಂಡು ಆವನ ಈ ಬಗೆಯ ಶುಷ್ಕ ಜೀವನದ ಬಗ್ಗೆ ಹೆಚ್ಚು ಬೇಸರ ಬಂತು. ಇನ್ನೇನು ಆವನ ಮನೆಯಿಂದ ಹೊರಗೆ ಹೋಗಬೇಕೆಂದು ನೆನೆಯುವಾಗ ಅವನು ಎದ್ದು ಕುಳಿತು "ಇಲ್ಲಿ ನೋಡು, ನಿನ್ನನ್ನು ಕೇಳುವ ಸರತಿ ನನ್ನದಾಗಿದೆ. ನಿನ್ನೆ ನೀನು ಹೇಳಿದುದೆಲ್ಲವನ್ನೂ ನಾನು ಮಾಡಿದೆ. ಹೀಗೆ ನನ್ನೊಂದಿಗೆ ನೀನು ವರ್ತಿಸಿದುದರ ಕಾರಣವೇನೆಂದು ಹೇಳು. ನನ್ನ ಜೀವನದಲ್ಲಿ ಇಂತಹ ಹಳ್ಳಿಯ ಹೆಣ್ಣನ್ನು ನಾನು ಕಂಡಿರಲಿಲ್ಲ. ನೀನು ವಿಚಿತ್ರ ಹೆಣ್ಣಿನಂತೆ ಕಾಣುವೆ" ಎಂದು ಹೇಳಿದ. ಅದಕ್ಕವಳು "ಏನೂ ಇಲ್ಲ. ನಾನು ಹಳ್ಳಿಯಲ್ಲಿ ಶೀಲತನದಿಂದ ಬೆಳೆದ ಮನೆತನದ ಹೆಣ್ಣು. ನನಗೆ ನಾಗರಿಕರೆನಿಸಿಕೊಂಡು ನಗರದಲ್ಲಿ ವಿಲಾಸಿಗಳ, ಶ್ರೀಮಂತರ ಜೀವನವೆಂತಹದೆಂಬುವದು ತಿಳಿದಿರಲಿಲ್ಲ. ನಿನ್ನೆಯ ಅನುಭವದಿಂದ ನಾನು ಅದರ ಮರ್ಮ ತಿಳಿದೆ. ಇದರಲ್ಲೇನೂ ಹುರುಳಿಲ್ಲ. ಇದೊಂದು ಬಿಸಿಲುಗುದುರೆಯಂತೆ........ನನಗೆ ಹೇಯವೆನಿಸುತ್ತಿದೆ....." ಎಂದು ಮಾತನಾಡುತ್ತ ಅವಳು ಮನೆಯ ಬಾಗಿಲಿನಿಂದ ಅವಸರದಿಂದ ಹೊರಬಿದ್ದು ತನ್ನೂರಿಗೆ ಹೊರಟು ಹೋದಳು. ಹಳ್ಳಿಯ ಜೀವನವೇ ಸುಖವೆಂದು ನಿಶ್ಚಯಿಸಿದಳು.

—Adventure.